6. **ಅರ್ಜಿ ಸಲ್ಲಿಸಲು ಪಾವತಿಸಬೇಕಾದ ಶುಲ್ಕ:–**

| ಕ್ರ.ಸಂ | ವಿವರ | ಪರೀಕ್ಷಾ ಶುಲ್ಕ | ಒಂದಕ್ಕಿಂತ ಹೆಚ್ಚು ಹುದ್ದೆಗಳಿಗೆ ಅರ್ಜಿ ಸಲ್ಲಿಸಿದಲ್ಲಿ ಪ್ರತಿ ಹೆಚ್ಚುವರಿ ಹುದ್ದೆಗೆ |
|---|---|---|---|
| 1 | ಸಾಮಾನ್ಯ ಅಭ್ಯರ್ಥಿ, ಪ್ರವರ್ಗ–2(ಎ), 2(ಬಿ), 3(ಎ), 3(ಬಿ)ಗೆ ಸೇರಿದ ಅಭ್ಯರ್ಥಿಗಳಿಗೆ | 500/– | 250/– |
| 2 | ಪರಿಶಿಷ್ಠ ಜಾತಿ, ಪರಿಶಿಷ್ಠ ಪಂಗಡ, ಪ್ರವರ್ಗ–1 ಹಾಗೂ ಅಂಗವಿಕಲ ಅಭ್ಯರ್ಥಿಗಳಿಗೆ | 250/– | 250/– |

(ಉದಾ: ಒಬ್ಬ ಅಭ್ಯರ್ಥಿ ಕನ್ನಡ ಭಾಷಾ ಶಿಕ್ಷಕ ಹುದ್ದೆಗೆ ಅರ್ಜಿ ಸಲ್ಲಿಸಿದಲ್ಲಿ ಶುಲ್ಕ ರೂ. 500/– ಆಗಿರುತ್ತದೆ. ಅದೇ ಅಭ್ಯರ್ಥಿ, ಕನ್ನಡ ಭಾಷೆಯ ಜೊತೆಗೆ ಕಲಾ ಶಿಕ್ಷಕ ಹುದ್ದೆಗೆ ಅರ್ಜಿಸಲ್ಲಿಸಿದಲ್ಲಿ ಶುಲ್ಕ ರೂ. 500/– + ರೂ. 250/– = ರೂ.750/– ಆಗುತ್ತದೆ. )

7. **ಅರ್ಜಿ ಸಲ್ಲಿಸುವ ಅವಧಿ :–**

ಅರ್ಜಿಯನ್ನು ದಿನಾಂಕ: 06.04.2015 ರಿಂದ 05.05.2015 ರವರೆಗೆ ನಿಗಧಿತ ಅವಧಿಯಲ್ಲಿ ಆನ್ ಲೈನ್ ಮೂಲಕ ಮಾತ್ರ ಸಲ್ಲಿಸಬೇಕು.

8. **ಪ್ರೌಢ ಶಾಲಾ ಸಹಾಯಕ ಶಿಕ್ಷಕ ಗ್ರೇಡ್–2 ವೃಂದದ (ವಿವಿಧ ವಿಷಯ ಹಾಗೂ ಬೋಧನಾ ಮಾಧ್ಯಮದ) ಮತ್ತು ದೈಹಿಕ ಶಿಕ್ಷಣ ಶಿಕ್ಷಕ ಗ್ರೇಡ್–1 ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಬಗ್ಗೆ.**

ಪ್ರೌಢ ಶಾಲಾ ಸಹಾಯಕ ಶಿಕ್ಷಕರು ಗ್ರೇಡ್–2 ವೃಂದದ, (ವಿವಿಧ ವಿಷಯ ಹಾಗೂ ಬೋಧನಾ ಮಾಧ್ಯಮದ) ಮತ್ತು ದೈಹಿಕ ಶಿಕ್ಷಣ ಶಿಕ್ಷಕ ಗ್ರೇಡ್–1 ಹುದ್ದೆಗಳಿಗೆ ಒಂದೇ ಅರ್ಜಿ ನಮೂನೆಯನ್ನು ನಿಗಧಿಪಡಿಸಿದೆ. ಅಭ್ಯರ್ಥಿಗಳು ಒಂದೇ ಅರ್ಜಿಯಲ್ಲಿ ಒಂದಕ್ಕಿಂತ ಹೆಚ್ಚು ವಿಷಯದ ಅಥವಾ ಬೋಧನಾ ಮಾಧ್ಯಮದ ಹುದ್ದೆಗಳಿಗೆ ಅರ್ಜಿ ಸಲ್ಲಿಸಬಹುದಾಗಿದೆ. ಪ್ರತ್ಯೇಕ ಅರ್ಜಿಗಳನ್ನು ಸಲ್ಲಿಸುವ ಅವಶ್ಯಕತೆ ಇರುವದಿಲ್ಲ. ಆದರೆ ಅಭ್ಯರ್ಥಿಗಳು ವಿವಿಧ ವಿಷಯ ಹಾಗೂ ಬೋಧನಾ ಮಾಧ್ಯಮದ ಹುದ್ದೆಗಳಿಗೆ ಆದ್ಯತೆಯನ್ನು ನಮೂದಿಸಬೇಕು. **ಆದ್ಯತೆ ಪ್ರಕಾರ ಆಯ್ಕೆ ಮಾಡಲಾಗುವುದು. ಒಂದು ಆದ್ಯತೆಯ ಪ್ರಕಾರ ಆಯ್ಕೆ ಹೊಂದಿದ್ದಲ್ಲಿ ಉಳಿದ ಆದ್ಯತೆಗಳನ್ನು ಕೈಬಿಡಲಾಗುವುದು.**

9. **ವಿದ್ಯಾರ್ಹತೆಗಳು:–**

**ಅಭ್ಯರ್ಥಿಗಳು ನೇಮಕಾತಿ ಅಧಿಸೂಚನೆ ದಿನಾಂಕದಂದು "ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ (ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್) (ರಿಕ್ರೂಟ್‌ಮೆಂಟ್) (ಅಮೆಂಡ್‌ಮೆಂಟ್) ರೂಲ್ಸ್ 2002"** ನಿಯಮಗಳಲ್ಲಿ ನಿಗದಿಪಡಿಸಿರುವಂತೆ, ಪ್ರೌಢ ಶಾಲಾ ಸಹಾಯಕ ಶಿಕ್ಷಕ ಗ್ರೇಡ್–2 ವೃಂದದ (ವಿವಿಧ ವಿಷಯಗಳು ಮತ್ತು ಬೋಧನಾ ಮಾಧ್ಯಮದ) ಮತ್ತು ದೈಹಿಕ ಶಿಕ್ಷಣ ಶಿಕ್ಷಕ ಗ್ರೇಡ್–1 ವೃಂದದ ಹುದ್ದೆಗಳಿಗೆ ಹೊಂದಿರಬೇಕಾದ ವಿದ್ಯಾರ್ಹತೆಗಳ ವಿವರಗಳು ಈ ಮುಂದೆ ತಿಳಿಸಿದಂತಿರುತ್ತದೆ.

**(ಅ) ಕಲಾ ಶಿಕ್ಷಕರ (ಕನ್ನಡ, ಆಂಗ್ಲ , ಮತ್ತು ಉರ್ದು ಮಾಧ್ಯಮ) ಹುದ್ದೆಗಳಿಗೆ (Arts Teacher) (Kannada,English, & Urdu Medium):-**

**i)** ಅಭ್ಯರ್ಥಿಯು ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ "**ಬ್ಯಾಚಲರ್ ಆಫ್ ಆರ್ಟ್ಸ್**" (ಬಿ.ಎ) ಪದವೀಧರರಾಗಿದ್ದು, ಈ ಪದವಿ ಪರೀಕ್ಷೆಯಲ್ಲಿ "**ಇತಿಹಾಸ, ಅರ್ಥಶಾಸ್ತ್ರ, ಭೂಗೋಳ ಶಾಸ್ತ್ರ ರಾಜ್ಯಶಾಸ್ತ್ರ, ಸಮಾಜ ಶಾಸ್ತ್ರ** ಇವುಗಳಲ್ಲಿ ಯಾವುದಾದರೂ **ಎರಡು ಐಚ್ಛಿಕ ವಿಷಯಗಳನ್ನು** ಅಧ್ಯಯನ ಮಾಡಿರಬೇಕು.

**ಮತ್ತು**

**ii]** ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾನಿಲಯದಿಂದ **ಬ್ಯಾಚುಲರ್ ಆಫ್ ಎಜ್ಯುಕೇಶನ್ (ಬಿ.ಇಡಿ)** ಪದವಿಯನ್ನು ಪಡೆದಿರಬೇಕು.

**ಹಾಗೂ**

**iii)** ಬೋಧನಾ ಮಾಧ್ಯಮದ ಭಾಷೆಯನ್ನು ಅಭ್ಯರ್ಥಿಯು **ಬ್ಯಾಚುಲರ್ ಆಫ್ ಆರ್ಟ್ಸ್ (ಬಿ.ಎ)** ಪದವಿಯಲ್ಲಿ ಒಂದು ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಬೋಧನಾ ಮಾಧ್ಯಮದ ಭಾಷೆಯನ್ನು ಬಿ.ಎ. ಪದವಿಯಲ್ಲಿ ಅಧ್ಯಯನ ಮಾಡದೆ ಇದ್ದಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಬೋಧನಾ ಮಾಧ್ಯಮದ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಎಸ್.ಎಸ್.ಎಲ್.ಸಿ. ಅಥವಾ ಬಿ.ಎ., ಪದವಿ ಪರೀಕ್ಷೆಯನ್ನು **ಬೋಧನಾ ಮಾಧ್ಯಮದ** ಭಾಷೆಯ ಮಾಧ್ಯಮದಲ್ಲಿ ಅಧ್ಯಯನ ಮಾಡಿರಬೇಕು.

**ಅಥವಾ**

ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾನಿಲಯದಿಂದ ಸಂಬಂಧಿಸಿದ ಬೋಧನಾ ಮಾಧ್ಯಮದ ಭಾಷೆಯಲ್ಲಿ **ಡಿಪ್ಲೋಮಾ** ಹೊಂದಿರಬೇಕು.

ಕನ್ನಡ ಮಾಧ್ಯಮದಲ್ಲಿ ಬೋಧಿಸುವ ವಿಷಯಗಳಿಗೆ ಸಂಬಂಧಿಸಿದಂತೆ ಮೇಲೆ ತಿಳಿಸಿದ ನಿಬಂಧನೆಗಳ ಪ್ರಕಾರ ಇಲ್ಲದಿದ್ದಲ್ಲಿ ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು ಅಥವಾ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಇವರುಗಳ ವತಿಯಿಂದ ನಡೆಸಲ್ಪಡುವ ಕನ್ನಡ ಸರ್ಟಿಫಿಕೇಟ್ ಕೋರ್ಸ್‌ನಲ್ಲಿ ಉತ್ತೀರ್ಣತೆ ಹೊಂದಿರಬೇಕು.

**(ಆ) <u>ಭೌತ ವಿಜ್ಞಾನ ಶಿಕ್ಷಕರ (ಕನ್ನಡ, ಆಂಗ್ಲ ಮತ್ತು ಉರ್ದು ಮಾಧ್ಯಮ) ಹುದ್ದೆಗಳಿಗೆ</u>**

**<u>(Physical Science Teacher (Kannada, English & Urdu Medium):-</u>**

**i)** ಅಭ್ಯರ್ಥಿಯು ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ "**ಬ್ಯಾಚಲರ್ ಆಫ್ ಸೈನ್ಸ್**" (ಬಿ.ಎಸ್ಸಿ) ಪದವೀಧರರಾಗಿದ್ದು, ಈ ಪದವಿ ಪರೀಕ್ಷೆಯಲ್ಲಿ ಈ ಕೆಳಕಂಡ ಐಚ್ಛಿಕ ವಿಷಯಗಳಲ್ಲಿ ಎರಡು ಐಚ್ಛಿಕ ವಿಷಯಗಳನ್ನು ಅಧ್ಯಯನ ಮಾಡಿರಬೇಕು. ಇದರಲ್ಲಿ "**ಗಣಿತ ಶಾಸ್ತ್ರ**" ಐಚ್ಛಿಕ ವಿಷಯವನ್ನು ಕಡ್ಡಾಯವಾಗಿ ಅಧ್ಯಯನ ಮಾಡಿರಬೇಕು.

**"ಭೌತಶಾಸ್ತ್ರ, ಗಣಿತಶಾಸ್ತ್ರ, ರಸಾಯನ ಶಾಸ್ತ್ರ"**

**ಅಥವಾ**

**"ಭೌತಶಾಸ್ತ್ರ, ಗಣಿತಶಾಸ್ತ್ರ, ಕಂಪ್ಯೂಟರ್ ಸೈನ್ಸ್"**

**ಅಥವಾ**

**"ಭೌತಶಾಸ್ತ್ರ, ಗಣಿತಶಾಸ್ತ್ರ, ಎಲೆಕ್ಟ್ರಾನಿಕ್ಸ್"**

**ಮತ್ತು**

**ii)** ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದಿಂದ "**ಬ್ಯಾಚಲರ್ ಆಫ್ ಎಜುಕೇಷನ್**'' (ಬಿ.ಇಡಿ.,) ಪದವಿ ಪಡೆದಿರಬೇಕು.

**ಹಾಗೂ**

**iii)** ಬೋಧನಾ ಮಾಧ್ಯಮದ ಭಾಷೆಯನ್ನು ಅಭ್ಯರ್ಥಿಯು "**ಬ್ಯಾಚಲರ್ ಆಫ್ ಸೈನ್ಸ್**" (ಬಿ.ಎಸ್ಸಿ) ಪದವಿಯಲ್ಲಿ ಒಂದು ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಬೋಧನಾ ಮಾಧ್ಯಮದ ಭಾಷೆಯನ್ನು ಬಿ.ಎಸ್ಸಿ. ಪದವಿಯಲ್ಲಿ ಅಧ್ಯಯನ ಮಾಡದೆ ಇದ್ದಲ್ಲಿ **ಎಸ್.ಎಸ್.ಎಲ್.ಸಿ.** ಪರೀಕ್ಷೆಯಲ್ಲಿ ಬೋಧನಾ ಮಾಧ್ಯಮದ ಭಾಷೆಯನ್ನು **ಪ್ರಥಮ ಅಥವಾ ದ್ವಿತೀಯ** ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಎಸ್.ಎಸ್.ಎಲ್.ಸಿ. ಅಥವಾ ಬಿ.ಎಸ್ಸಿ. ಪದವಿ ಪರೀಕ್ಷೆಯನ್ನು **ಬೋಧನಾ ಮಾಧ್ಯಮದ** ಭಾಷೆಯ ಮಾಧ್ಯಮದಲ್ಲಿ ಅಧ್ಯಯನ ಮಾಡಿರಬೇಕು.

**ಅಥವಾ**

ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದಿಂದ, ಸಂಬಂಧಿಸಿದ ಬೋಧನಾ ಮಾಧ್ಯಮದ ಭಾಷೆಯಲ್ಲಿ **ಡಿಪ್ಲೋಮಾ ವನ್ನು** ಹೊಂದಿರಬೇಕು.

ಕನ್ನಡ ಮಾಧ್ಯಮದಲ್ಲಿ ಬೋಧಿಸುವ ವಿಷಯಗಳಿಗೆ ಸಂಬಂಧಿಸಿದಂತೆ ಮೇಲೆ ತಿಳಿಸಿದ ನಿಬಂಧನೆಗಳ ಪ್ರಕಾರ ಇಲ್ಲದಿದ್ದಲ್ಲಿ ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು ಅಥವಾ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಇವರುಗಳ ವತಿಯಿಂದ ನಡೆಸಲ್ಪಡುವ ಕನ್ನಡ ಸರ್ಟಿಫಿಕೇಟ್ ಕೋರ್ಸ್‌ನಲ್ಲಿ ಉತ್ತೀರ್ಣತೆ ಪಡೆದಿರಬೇಕು.

**(ಇ) <u>ಜೀವ ವಿಜ್ಞಾನ ಶಿಕ್ಷಕರ (ಕನ್ನಡ,ಆಂಗ್ಲ ಮತ್ತು ಉರ್ದು ಮಾಧ್ಯಮ) ಹುದ್ದೆಗಳಿಗೆ (Biological Science Teacher (Kannada,English & Urdu Medium)</u>:-**

**i)** ಅಭ್ಯರ್ಥಿಯು, ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ "**ಬ್ಯಾಚಲರ್ ಆಫ್ ಸೈನ್ಸ್**" (ಬಿ.ಎಸ್ಸಿ) ಪದವೀಧರರಾಗಿದ್ದು, ಈ ಪದವಿ ಪರೀಕ್ಷೆಯಲ್ಲಿ **ರಸಾಯನ ಶಾಸ್ತ್ರ, ಸಸ್ಯಶಾಸ್ತ್ರ ಮತ್ತು ಪ್ರಾಣಿಶಾಸ್ತ್ರ** ಈ ಐಚ್ಛಿಕ ವಿಷಯಗಳಲ್ಲಿ ಎರಡು ಐಚ್ಛಿಕ ವಿಷಯಗಳನ್ನು ಅಧ್ಯಯನ ಮಾಡಿರಬೇಕು. ಹಾಗೂ ಇದರಲ್ಲಿ **<u>"ರಸಾಯನಶಾಸ್ತ್ರ "</u>** ಐಚ್ಛಿಕ ವಿಷಯವನ್ನು ಕಡ್ಡಾಯವಾಗಿ ಅಧ್ಯಯನ ಮಾಡಿರಬೇಕು.

**ಮತ್ತು**

**ii)** ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದಿಂದ "**ಬ್ಯಾಚಲರ್ ಆಫ್ ಎಜುಕೇಷನ್**'' (ಬಿ.ಎಡ್) ಪದವಿ ಪಡೆದಿರಬೇಕು.

**ಹಾಗೂ**

**iii)** ಬೋಧನಾ ಮಾಧ್ಯಮದ ಭಾಷೆಯನ್ನು ಅಭ್ಯರ್ಥಿಯು "**ಬ್ಯಾಚಲರ್ ಆಫ್ ಸೈನ್ಸ್**" (ಬಿ.ಎಸ್ಸಿ) ಪದವಿಯಲ್ಲಿ ಒಂದು ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಬೋಧನಾ ಮಾಧ್ಯಮದ ಭಾಷೆಯನ್ನು ಬಿ.ಎಸ್ಸಿ. ಪದವಿಯಲ್ಲಿ ಅಧ್ಯಯನ ಮಾಡದೆ ಇದ್ದಲ್ಲಿ **ಎಸ್.ಎಸ್.ಎಲ್.ಸಿ.** ಪರೀಕ್ಷೆಯಲ್ಲಿ ಬೋಧನಾ ಮಾಧ್ಯಮದ ಭಾಷೆಯನ್ನು **ಪ್ರಥಮ ಅಥವಾ ದ್ವಿತೀಯ** ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಎಸ್.ಎಸ್.ಎಲ್.ಸಿ. ಅಥವಾ ಬಿ.ಎಸ್ಸಿ. ಪದವಿ ಪರೀಕ್ಷೆಯನ್ನು **ಬೋಧನಾ ಮಾಧ್ಯಮದ** ಭಾಷೆಯ ಮಾಧ್ಯಮದಲ್ಲಿ ಅಧ್ಯಯನ ಮಾಡಿರಬೇಕು.

**ಅಥವಾ**

ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದಿಂದ, ಸಂಬಂಧಿಸಿದ ಬೋಧನಾ ಮಾಧ್ಯಮದ ಭಾಷೆಯಲ್ಲಿ '**ಡಿಪ್ಲೋಮಾ**' **ವನ್ನು** ಹೊಂದಿರಬೇಕು.

ಕನ್ನಡ ಮಾಧ್ಯಮದಲ್ಲಿ ಬೋಧಿಸುವ ವಿಷಯಗಳಿಗೆ ಸಂಬಂಧಿಸಿದಂತೆ ಮೇಲೆ ತಿಳಿಸಿದ ನಿಬಂಧನೆಗಳ ಪ್ರಕಾರ ಇಲ್ಲದಿದ್ದಲ್ಲಿ ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು ಅಥವಾ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಇವರುಗಳ ವತಿಯಿಂದ ನಡೆಸಲ್ಪಡುವ ಕನ್ನಡ ಸರ್ಟಿಫಿಕೇಟ್ ಕೋರ್ಸ್‌ನಲ್ಲಿ ಉತ್ತೀರ್ಣತೆ ಪಡೆದಿರಬೇಕು.

**(ಈ)** **ಭಾಷಾ ಶಿಕ್ಷಕರ ಹುದ್ದೆಗಳಿಗೆ (Language Assistants):–**

**i)** ಅಭ್ಯರ್ಥಿಯು ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ "**ಬ್ಯಾಚಲರ್ ಆಫ್ ಆರ್ಟ್ಸ್**" (ಬಿ.ಎ) ಪದವೀಧರರಾಗಿದ್ದು, ಈ ಪದವಿ ಪರೀಕ್ಷೆಯಲ್ಲಿ ಸಂಬಂಧಿಸಿದ ಭಾಷಾ ಶಿಕ್ಷಕರ ಹುದ್ದೆಗೆ ಅನುಗುಣವಾದ ಭಾಷೆಯನ್ನು ಒಂದು ಐಚ್ಛಿಕ ವಿಷಯವನ್ನಾಗಿ (Optional) ಅಧ್ಯಯನ ಮಾಡಿರಬೇಕು. ಭಾಷೆಗಳು ಅಂದರೆ **ಕನ್ನಡ, ಇಂಗ್ಲೀಷ್, ಹಿಂದಿ, ಉರ್ದು, ತಮಿಳು ಮತ್ತು ಸಂಸ್ಕೃತ.**

**ಅಥವಾ**

ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಬೆಂಗಳೂರು ಇವರು ನಡೆಸುವ (04) ನಾಲ್ಕು ವರ್ಷಗಳ ಅವಧಿಯ **ಕನ್ನಡ ಪಂಡಿತ, ಸಂಸ್ಕೃತ ವಿದ್ವಾನ್, ಉರ್ದು ಮುನ್ಷಿ** ಪರೀಕ್ಷೆಯನ್ನು ಪಾಸು ಮಾಡಿರಬೇಕು.

**ಮತ್ತು**

**ii)** ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದಿಂದ "**ಬ್ಯಾಚಲರ್ ಆಫ್ ಎಜುಕೇಷನ್**" (ಬಿ.ಇಡಿ.,) ಪದವಿ ಪಡೆದಿರಬೇಕು.

**ಬ್ಯಾಚುಲರ್ ಪದವಿಯಲ್ಲಿ ಸಂಬಂಧಿಸಿದ ಭಾಷಾ ಶಿಕ್ಷಕರ ಹುದ್ದೆಗೆ ಅನುಗುಣವಾದ ಭಾಷಾ ಐಚ್ಛಿಕ ವಿಷಯವನ್ನು ಅಧ್ಯಯನ ಮಾಡದೆ ಇದ್ದಲ್ಲಿ ಅಂಥಹ ಅಭ್ಯರ್ಥಿಗಳು;**

**a)** ಸಂಬಂದಿಸಿದ ಭಾಷಾ ವಿಷಯದಲ್ಲಿ ಸ್ನಾತಕೋತ್ತರ ಪದವಿಯನ್ನು **(Post Graduate Degree)** ಹೊಂದಿದ್ದಲ್ಲಿ ಸಂಬಂಧಿಸಿದ ಭಾಷಾ ಶಿಕ್ಷಕರ ಹುದ್ದೆಗೆ ಪರಿಗಣಿಸಲು ಅರ್ಹತೆ ಪಡೆಯುತ್ತಾರೆ.

**b)** **ರೀಜನಲ್ ಇನ್‌ಸ್ಟ್ಯೂಟ್ ಆಫ್ ಇಂಗ್ಲೀಷ್ ಸೌತ್ ಇಂಡಿಯಾ** ಇವರು ನೀಡುವ **ಪೋಸ್ಟ್ ಗ್ರಾಜುಯೇಟ್ ಡಿಪ್ಲೋಮಾ ಸರ್ಟಿಫಿಕೇಟ್ ಇನ್ ಇಂಗ್ಲೀಷ್** ಹೊಂದಿದ್ದಲ್ಲಿ ಅಂತಹ ಅಭ್ಯರ್ಥಿಗಳು ಇಂಗ್ಲೀಷ್ ಭಾಷಾ ಶಿಕ್ಷಕರ ಹುದ್ದೆಗೆ ಪರಿಗಣಿಸಲು ಅರ್ಹತೆ ಪಡೆಯುತ್ತಾರೆ.

**c)** ಹಿಂದಿ ಭಾಷಾ ಶಿಕ್ಷಕರ ಹುದ್ದೆಗೆ ಅಭ್ಯರ್ಥಿಯು, ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ **ಬ್ಯಾಚುಲರ್ ಪದವೀಧರರಾಗಿದ್ದು,** ಈ ಪದವಿಯಲ್ಲಿ **ಹಿಂದಿ**ಯನ್ನು ಒಂದು ಐಚ್ಛಿಕ ವಿಷಯವನ್ನಾಗಿ ಅಧ್ಯಯನ ಮಾಡಿರಬೇಕು.

**ಮತ್ತು**

ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದಿಂದ **ಬ್ಯಾಚುಲರ್ ಆಫ್ ಎಜುಕೇಷನ್ (ಬಿ.ಇಡಿ.,)** ಪದವೀಧರರಾಗಿದ್ದು, ಈ ಪದವಿ ಪರೀಕ್ಷೆಯಲ್ಲಿ **ಹಿಂದಿ**ಯನ್ನು ಬೋಧನಾ ವಿಷಯವನ್ನಾಗಿ ಅಧ್ಯಯನ ಮಾಡಿರಬೇಕು.

**d)** ಇಂಗ್ಲೀಷ್ ಭಾಷಾ ಶಿಕ್ಷಕರ ಹುದ್ದೆಗೆ ಸಂಬಂಧಿಸಿದಂತೆ ಅಭ್ಯರ್ಥಿಗಳು ಬಿ.ಎಡ್. ಪದವಿಯಲ್ಲಿ ಇಂಗ್ಲೀಷ್‌ನ್ನು ಬೋಧನಾ ವಿಷಯವನ್ನಾಗಿ ಅಧ್ಯಯನ ಮಾಡದೆ ಇದ್ದಲ್ಲಿ ಅಂತಹ ಅಭ್ಯರ್ಥಿಗಳು **ರೀಜನಲ್ ಇನ್‌ಸ್ಟ್ಯೂಟ್ ಆಫ್ ಇಂಗ್ಲೀಷ್, ಸೌತ್ ಇಂಡಿಯಾ** ಇವರು ನೀಡುವ **ಪೋಸ್ಟ್ ಗ್ರಾಜುಯೇಟ್ ಡಿಪ್ಲೋಮಾ ಸರ್ಟಿಫಿಕೇಟ್ ಇನ್ ಇಂಗ್ಲೀಷ್** ಹೊಂದಿದ್ದಲ್ಲಿ ನೇಮಕಾತಿಗೆ ಪರಿಗಣಿಸಲು ಅರ್ಹತೆ ಪಡೆಯುತ್ತಾರೆ.

**ವಿಶೇಷ ಸೂಚನೆ:–** **ಮೇಲ್ಕಂಡ ಎ, ಬಿ ಮತ್ತು ಡಿ ಪ್ರಕರಣಗಳಲ್ಲಿ ಅಭ್ಯರ್ಥಿಯು ಬ್ಯಾಚುಲರ್ ಪದವಿ ಮತ್ತು ಬ್ಯಾಚುಲರ್ ಆಫ್ ಎಜುಕೇಷನ್ ಪದವಿ ಪರೀಕ್ಷೆಗಳಲ್ಲಿ ಪಡೆದಿರುವ ಅಂಕಗಳನ್ನು ಮಾತ್ರ ಮೆರಿಟ್ ಕಂಡುಕೊಳ್ಳಲು ಪರಿಗಣಿಸಲಾಗುತ್ತದೆ. ಆದರೆ ಸ್ನಾತಕೋತ್ತರ ಮತ್ತು ಡಿಪ್ಲೋಮಾ ಪರೀಕ್ಷೆಗಳಲ್ಲಿ ಪಡೆದಿರುವ ಅಂಕಗಳನ್ನು ಮೆರಿಟ್ ಕಂಡು ಹಿಡಿಯಲು ಗಣನೆಗೆ ತೆಗೆದುಕೊಳ್ಳುವುದಿಲ್ಲ.**

**ಹಿಂದಿ ಭಾಷಾ ಶಿಕ್ಷಕರ ಹುದ್ದೆಗೆ ಸಂಬಂಧಿಸಿದಂತೆ ಅಭ್ಯರ್ಥಿಯು:–**

1. ದಕ್ಷಿಣ ಭಾರತ ಹಿಂದಿ ಪ್ರಚಾರ ಸಭಾ, ಮದ್ರಾಸ್ ಇವರು ನಡೆಸುವ **ರಾಷ್ಟ್ರಭಾಷಾ ಪ್ರವೀಣ್ ಮತ್ತು ಶಿಕ್ಷಾ ಸ್ನಾತಕ್** (ಹಿಂದಿ ಮತ್ತು ಮತ್ತೊಂದು ಭಾಷೆಯನ್ನು ಬೋಧನಾ ವಿಷಯವನ್ನಾಗಿ **ಶಿಕ್ಷಾ ಸ್ನಾತಕ್** ಪರೀಕ್ಷೆಯಲ್ಲಿ ಅಧ್ಯಯನ ಮಾಡಿರಬೇಕು) ಮತ್ತು **ಪದವಿ ಪೂರ್ವ ಶಿಕ್ಷಣ (ಪಿ.ಯು.ಸಿ) ಕೋರ್ಸಿನಲ್ಲಿ ಉತ್ತೀರ್ಣರಾಗಿದ್ದು,** ಸದರಿ ಕೋರ್ಸಿನಲ್ಲಿ ಕನ್ನಡ ಅಥವಾ ಯಾವುದೇ ಒಂದು ಪ್ರಾದೇಶಿಕ ಭಾಷೆಯನ್ನು ಒಂದು ವಿಷಯವನ್ನಾಗಿ ಅಥವಾ ಮಾಧ್ಯಮವನ್ನಾಗಿ ವ್ಯಾಸಂಗ ಮಾಡಿರಬೇಕು.

**ಅಥವಾ**

2. ರಾಜ್ಯ ಸರ್ಕಾರವು ತತ್ಸಮಾನ ವಿದ್ಯಾರ್ಹತೆ ಎಂದು ಘೋಷಿರುವ ಇತರೆ ಯಾವುದೇ ವಿದ್ಯಾರ್ಹತೆಯನ್ನು ಹೊಂದಿದ್ದಲ್ಲಿ ನೇಮಕಾತಿಗೆ ಪರಿಗಣಿಸಲು ಅರ್ಹತೆ ಪಡೆಯುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ ಇಡಿ 160 ಪಿಟಿಐ 2003 ದಿನಾಂಕ 24–02–2004ರನ್ವಯ ಈ ಕೆಳಕಂಡಂತೆ ಪದವಿ ಮತ್ತು ಬಿ.ಇಡಿ, ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿರಬೇಕು.**

ಅ) ಪದವಿ ತತ್ಸಮಾನ ಪರೀಕ್ಷೆ ಹೆಸರು ಸಂಸ್ಥೆಯ ಹೆಸರು

1. ಹಿಂದಿ ರತ್ನ ಮೈಸೂರು ಹಿಂದಿ ಪ್ರಚಾರ ಪರಿಷತ್, ಬೆಂಗಳೂರು

2. ರಾಜ ಭಾಷಾ ವಿದ್ವಾನ್ ಕರ್ನಾಟಕ ಹಿಂದಿ ಪ್ರಚಾರ ಸಮಿತಿ, ಬೆಂಗಳೂರು

3 ಹಿಂದಿ ಭಾಷಾ ಪ್ರವೀಣ್ ಕರ್ನಾಟಕ ಮಹಿಳಾ ಹಿಂದಿ ಸೇವಾ ಸಮಿತಿ, ಬೆಂಗಳೂರು

4 ರಾಷ್ಟ್ರಭಾಷಾ ಪ್ರವೀಣ್ ದಕ್ಷಿಣ ಭಾರತ ಹಿಂದಿ ಪ್ರಚಾರ ಸಭಾ, ಮದ್ರಾಸ್

ಸರ್ಕಾರದ ಆದೇಶ ಸಂಖ್ಯೆ ಇಡಿ 125 ಪಿಟಿಐ 2003 ದಿನಾಂಕ 16–08–2003 ಹಾಗೂ ಇಡಿ 272 ಪಿಟಿಐ 2013 ದಿನಾಂಕ: 23.11.2013 ರನ್ವಯ ಕೆಳಕಂಡ ವಿದ್ಯಾರ್ಹತೆಗಳನ್ನು ಬಿಎಡ್ ಪರೀಕ್ಷೆಗೆ ತತ್ಸಮಾನವೆಂದು ಈ ಕೆಳಕಂಡ ಷರತ್ತಿಗೆ ಒಳಪಟ್ಟು ಘೋಷಿಸಲಾಗಿದೆ.

ಆ) ಬಿಎಡ್ ತತ್ಸಮಾನ ಪರೀಕ್ಷೆ ಹೆಸರು ಸಂಸ್ಥೆಯ ಹೆಸರು

1. ಹಿಂದಿ ಶಿಕ್ಷಕ್ ಅ. ಕರ್ನಾಟಕ ಮಹಿಳಾ ಹಿಂದಿ ಸೇವಾ ಸಮಿತಿ,ಬೆಂಗಳೂರು

ಆ. ಕರ್ನಾಟಕ ಹಿಂದಿ ಪ್ರಚಾರ ಸಮಿತಿ, ಬೆಂಗಳೂರು

ಇ. ಮೈಸೂರು ಹಿಂದಿ ಪ್ರಚಾರ ಪರಿಷತ್, ಬೆಂಗಳೂರು

ಈ. ಮಾನಸ ಎಜುಕೇಷನ್ ಸೊಸೈಟಿ, ತುಮಕೂರು

ಉ. ಕರ್ನಾಟಕ ಲೇಬರ್ ಎಜುಕೇಷನ್ ಸೊಸೈಟಿ, ಬೀದರ್

ಊ.ಕರ್ನಾಟಕ ಪ್ರದೇಶ ಸಾಹಿತ್ಯ ಸಮ್ಮೇಳನ, ಗುಲ್ಬರ್ಗಾ.

2. ಹಿಂದಿ ಶಿಕ್ಷಣ ಪಾರಂಗತ್ ಕೇಂದ್ರೀಯ ಹಿಂದಿ ಸಂಸ್ಥಾನ್, ಆಗ್ರಾ [ಸರ್ಕಾರಿ ಹಿಂದಿ ಶಿಕ್ಷಕರ ತರಬೇತಿ ಕಾಲೇಜು, ಮೈಸೂರು.]

ಷರತ್ತುಗಳು:–

I) ಹಿಂದಿ ಶಿಕ್ಷಕ್ ಮತ್ತು ಹಿಂದಿ ಶಿಕ್ಷಣ ಪಾರಂಗತ್ ವಿದ್ಯಾರ್ಹತೆ ಹೊಂದಿರುವ ಅಭ್ಯರ್ಥಿಗಳು ಸದರಿ ಕೋರ್ಸನ್ನು ಸೇರುವ ಮುಂಚೆ ಪಿ.ಯು.ಸಿ.ಯಲ್ಲಿ ಉತ್ತೀರ್ಣರಾಗಿದ್ದು, ಸದರಿ ಪಿ.ಯು ಕೋರ್ಸಿನಲ್ಲಿ ಕನ್ನಡ ಅಥವಾ ಯಾವುದಾದರೂ ಒಂದು ಪ್ರಾದೇಶಿಕ ಭಾಷೆಯನ್ನು ಒಂದು ವಿಷಯವನ್ನಾಗಿ ಅಥವಾ ಮಾಧ್ಯಮವನ್ನಾಗಿ ವ್ಯಾಸಂಗ ಮಾಡಿರಬೇಕು.

II) ಹಿಂದಿ ಜೊತೆಗೆ ಮತ್ತೊಂದು ಭಾಷೆಯನ್ನು ಬೋಧನಾ ವಿಧಾನವನ್ನಾಗಿ ಅಧ್ಯಯನ ಮಾಡಿರಬೇಕು.

(ಉ) <u>ದೈಹಿಕ ಶಿಕ್ಷಣ ಶಿಕ್ಷಕ ಗ್ರೇಡ್–1 ಹುದ್ದೆಗಳಿಗೆ (Physical Education Teacher Grade-I):–</u>

i) ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ **"ಬ್ಯಾಚಲರ್ ಪದವಿ"** ಯನ್ನು ಪಡೆದಿರಬೇಕು.

**ಮತ್ತು**

ii) ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ **"ಬ್ಯಾಚಲರ್ ಆಫ್ ಫಿಸಿಕಲ್ ಎಜುಕೇಷನ್"** ಪದವಿಯನ್ನು ಪಡೆದಿರಬೇಕು. ಅಥವಾ **ಗೌರ್ನಮೆಂಟ್ ಕಾಲೇಜ್ ಆಫ್ ಫಿಸಿಕಲ್ ಎಜುಕೇಷನ್** ಇಲ್ಲಿಂದ **ಡಿಪ್ಲೋಮಾ ಇನ್ ಫಿಸಿಕಲ್ ಎಜುಕೇಷನ್** ಹೊಂದಿರಬೇಕು. ಅಥವಾ ರಾಜ್ಯ ಸರಕಾರವು ತತ್ಸಮಾನ ಪರೀಕ್ಷೆ ಎಂದು ಪರಿಗಣಿಸಿರುವ ವಿದ್ಯಾರ್ಹತೆಯನ್ನು ಹೊಂದಿರಬೇಕು.

**ಸೂಚನೆ : ಸರ್ಕಾರಿ ಪ್ರೌಢಶಾಲಾ ಶಿಕ್ಷಕರ ನೇಮಕಾತಿ ನಡೆಸಲಾಗುವ ಸ್ಪರ್ಧಾತ್ಮಕ ಪರೀಕ್ಷೆಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಕಡ್ಡಾಯವಾಗಿ ಸಾಮಾನ್ಯ ಕಂಪ್ಯೂಟರ್ ಜ್ಞಾನವನ್ನು (Fundamentals, MSWindows, MS Word, MS Excell, MS Power Point) ಹೊಂದಿರತಕ್ಕದ್ದು.**

10. <u>**ವೇತನ ಶ್ರೇಣಿ:**</u>– ಪ್ರೌಢ ಶಾಲಾ ಸಹಾಯಕ ಶಿಕ್ಷಕರು ಗ್ರೇಡ್–2 ಹಾಗೂ ದೈಹಿಕ ಶಿಕ್ಷಣ ಶಿಕ್ಷಕ ಗ್ರೇಡ್–1 ವೃಂದದ ಹುದ್ದೆಗಳಿಗೆ: **ರೂ.17650–450–19000–500–21000–600–24600–700–28800–800–32000.**

11. <u>**ವಯೋಮಿತಿ**</u>

ಅಭ್ಯರ್ಥಿಗಳು ಈ **ನೇಮಕಾತಿ ಅಧಿಸೂಚನೆ** ದಿನಾಂಕದಂದು ಮುಂದೆ ತಿಳಿಸಿರುವ ಕನಿಷ್ಠ ಮತ್ತು ಗರಿಷ್ಠ ವಯೋಮಿತಿಯೊಳಗಿರಬೇಕು.

<u>**ಕನಿಷ್ಠ:**</u> **20 ವರ್ಷಗಳು ತುಂಬಿರಬೇಕು.**

<u>**ಗರಿಷ್ಠ:**</u>

| | |
|---|---|
| **ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡ ಅಥವಾ ಹಿಂದುಳಿದ ಪ್ರವರ್ಗ–1ಕ್ಕೆ** ಸೇರಿದ ಅಭ್ಯರ್ಥಿಗಳು | **45 ವರ್ಷಗಳನ್ನು ತಲುಪಿರಬಾರದು.** |
| **ಪ್ರವರ್ಗ 2(ಎ), 2(ಬಿ), 3(ಎ) ಮತ್ತು 3(ಬಿ)** ಗಳಿಗೆ ಸೇರಿದ ಅಭ್ಯರ್ಥಿಗಳು | **43 ವರ್ಷಗಳನ್ನು** ತಲುಪಿರಬಾರದು. |
| **ಇತರೆ ಅಭ್ಯರ್ಥಿಗಳು [ಸಾಮಾನ್ಯ ಅಭ್ಯರ್ಥಿಗಳು]** | **40 ವರ್ಷಗಳನ್ನು** ತಲುಪಿರಬಾರದು. |

ಸರ್ಕಾರಿ ಪ್ರೌಢಶಾಲೆಗಳಲ್ಲಿ ಕಾರ್ಯನಿರ್ವಹಿಸಿದ /ನಿರ್ವಹಿಸುತ್ತಿರುವ **"ಅರೆಕಾಲಿಕ"** ಮತ್ತು ಗೌರವ ಶಿಕ್ಷಕರುಗಳಿಗೆ ಗರಿಷ್ಠ ವಯೋಮಿತಿಯನ್ನು ಅವರುಗಳು **"ಅರೆಕಾಲಿಕ/ಗೌರವ ಶಿಕ್ಷಕರ** ಸೇವೆ ಸಲ್ಲಿಸಿದ ವರ್ಷಗಳಷ್ಟು (ಗರಿಷ್ಠ 10 ವರ್ಷಗಳ ಮಿತಿಗೆ ಒಳಪಟ್ಟು) ಸಡಿಲಿಕೆ ಇರುತ್ತದೆ.

ಮಾಜಿ ಸೈನಿಕರಿಗೆ ಅವರು ಸೇವೆ ಸಲ್ಲಿಸದ ವರ್ಷಗಳಷ್ಟು ಅವಧಿ +3ವರ್ಷಗಳ ವಯೋಮಿತಿ ಸಡಿಲಿಕೆ ಇರುತ್ತದೆ.

12. **<u>ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ:–</u>ಆಯ್ಕೆ ಬಯಸುವ ಪ್ರತಿ ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಪ್ರಥಮ ಹಾಗೂ ದ್ವಿತೀಯ ಪತ್ರಿಕೆಯ ಪರೀಕ್ಷೆಗಳಿಗೆ ಕಡ್ಡಾಯವಾಗಿ ಹಾಜರಾಗಬೇಕು.**

13. **<u>ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಬಗ್ಗೆ ವಿವರಗಳು:–</u>**

**i)** **ಪರೀಕ್ಷೆ ಹೆಸರು:** ಪ್ರೌಢಶಾಲಾ ಸಹಾಯಕ ಶಿಕ್ಷಕ ಗ್ರೇಡ್–2 ವೃಂದದ ಮತ್ತು ದೈಹಿಕ ಶಿಕ್ಷಣ ಶಿಕ್ಷಕ ಗ್ರೇಡ್–1 ವೃಂದದ ಶಿಕ್ಷಕರ ಹುದ್ದೆಗಳಿಗೆ ನೇರ ನೇಮಕಾತಿಗಾಗಿ ನಡೆಸುವ ವಿಭಾಗೀಯ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ.

**ii)** **ಪರೀಕ್ಷೆ ನಡೆಸುವ ಪ್ರಾಧಿಕಾರಿ:** ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯನ್ನು ಬೆಂಗಳೂರು ವಿಭಾಗೀಯ ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ವಿಭಾಗ, ಬೆಂಗಳೂರು ಇವರು ವಿಭಾಗ ಮಟ್ಟದಲ್ಲಿ ನಡೆಸುವರು. ವಿಭಾಗದ ವ್ಯಾಪ್ತಿಯಲ್ಲಿ ಬರುವ ಶೈಕ್ಷಣಿಕ ಜಿಲ್ಲೆಗಳು **<u>(ಬೆಂಗಳೂರು ಉತ್ತರ, ಬೆಂಗಳೂರು ದಕ್ಷಿಣ, ಬೆಂಗಳೂರು ಗ್ರಾಮಾಂತರ, ರಾಮನಗರ, ಕೋಲಾರ, ಚಿತ್ರದುಗ, ತುಮಕೂರು, ಚಿಕ್ಕಬಳ್ಳಾಪುರ, ಮಧುಗಿರಿ, ದಾವಣಗೆರೆ ಮತ್ತು ಶಿವಮೊಗ್ಗ)</u>** ಪರೀಕ್ಷಾ ಕೇಂದ್ರಗಳಾಗಿರುತ್ತವೆ.

**iii)** **ಪರೀಕ್ಷೆಯ ದಿನಾಂಕ: 13.06.2015 ರಿಂದ 15.06.2015. ರವರೆಗೆ**

**iv)** **ಪರೀಕ್ಷೆಯ ಅವಧಿ ಮತ್ತು ಸಮಯ :**

| ಪರೀಕ್ಷಾ ವಿಷಯ | ದಿನಾಂಕ | ಸಮಯ |
|---|---|---|
| ಸಾಮಾನ್ಯ ಪತ್ರಿಕೆ –1 | 13.06.2015 | ಬೆಳಗ್ಗೆ 09 ರಿಂದ 11 ಗಂಟೆವರೆಗೆ |
| ಕಲಾ ಶಿಕ್ಷಕರು ಪತ್ರಿಕೆ–2 | 13.06.2015 | ಮಧ್ಯಾಹ್ನ 12 ರಿಂದ 2 ಗಂಟೆವರೆಗೆ |
| ದೈ.ಶಿ. ಗ್ರೇಡ್–1 ಪತ್ರಿಕೆ–2 | 13.06.2015 | ಮಧ್ಯಾಹ್ನ 3.30 ರಿಂದ 5.30 ಗಂಟೆವರೆಗೆ |
| ಭೌತವಿಜ್ಞಾನ/ಜೀವವಿಜ್ಞಾನ ಪತ್ರಿಕೆ–2 | 14.06.2015 | ಬೆಳಗ್ಗೆ 09 ರಿಂದ 11 ಗಂಟೆವರೆಗೆ |
| ಕನ್ನಡ ಭಾಷಾ ಶಿಕ್ಷಕರು ಪತ್ರಿಕೆ–2 | 14.06.2015 | ಮಧ್ಯಾಹ್ನ 12 ರಿಂದ 2 ಗಂಟೆವರೆಗೆ |
| ಆಂಗ್ಲ ಭಾಷಾ ಶಿಕ್ಷಕರು ಪತ್ರಿಕೆ–2 | 14.06.2015 | ಮಧ್ಯಾಹ್ನ 3.30 ರಿಂದ 5.30 ಗಂಟೆವರೆಗೆ |
| ಹಿಂದಿ ಭಾಷಾ ಶಿಕ್ಷಕರು ಪತ್ರಿಕೆ–2 | 15.06.2015 | ಬೆಳಗ್ಗೆ 09 ರಿಂದ 11 ಗಂಟೆವರೆಗೆ |
| ಸಂಸ್ಕೃತ/ಉರ್ದು/ತಮಿಳು/ತೆಲುಗು ಪತ್ರಿಕೆ–2 | 15.06.2015 | ಮಧ್ಯಾಹ್ನ 12 ರಿಂದ 2 ಗಂಟೆವರೆಗೆ |

**v)** **ಪರೀಕ್ಷಾ ಮಾಧ್ಯಮ: ಕನ್ನಡ ಮತ್ತು ಆಂಗ್ಲ ಮಾಧ್ಯಮ**

**vi)** **ಪ್ರಶ್ನೆಪತ್ರಿಕೆ, ಅಂಕಗಳು ಮತ್ತು ವಿಷಯ:** ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಕೆಳಕಂಡ ವಿಷಯಗಳನ್ನೊಳಗೊಂಡ ಪರೀಕ್ಷಾ ವಿಷಯಗಳು ಎರಡು ಪ್ರಶ್ನೆ ಪತ್ರಿಕೆಗಳನ್ನು ಹೊಂದಿರುತ್ತದೆ. ಒಂದನೇ ಪ್ರಶ್ನೆ ಪತ್ರಿಕೆಯು (ಪತ್ರಿಕೆ–1) 100 ಅಂಕಗಳನ್ನು ಒಳಗೊಂಡಿದ್ದು, ಎಲ್ಲಾ ವಿಷಯದ ಹುದ್ದೆಗಳಿಗೂ ಕಡ್ಡಾಯವಾಗಿರುತ್ತದೆ.

| ಕ್ರ.ಸಂ. | ಹುದ್ದೆಯ ಹೆಸರು | ವಿಷಯ | ಅಂಕಗಳು |
|---|---|---|---|
| 1 | **ಪ್ರೌಢಶಾಲಾ ಸಹಾಯಕ ಶಿಕ್ಷಕ ಗ್ರೇಡ್–2 (ಫಿಸಿಕಲ್ ಸೈನ್ಸ್, ಬಯಾಲಜಿಕಲ್ ಸೈನ್ಸ್, ಕಲಾ ಹಾಗೂ ಕನ್ನಡ, ಆಂಗ್ಲ, ಹಿಂದಿ, ಸಂಸ್ಕೃತ, ತಮಿಳು ಮತ್ತು ಉರ್ದು ಭಾಷಾ ಶಿಕ್ಷಕರ ಹುದ್ದೆಗಳು) / ದೈಹಿಕ ಶಿಕ್ಷಣ ಶಿಕ್ಷಕ ಗ್ರೇಡ್–1** | **<u>ಒಂದನೇ ಪ್ರಶ್ನೆ ಪತ್ರಿಕೆ</u>**<br>ಸಾಮಾನ್ಯ ಜ್ಞಾನ<br>ಶೈಕ್ಷಣಿಕ ಮನೋವಿಜ್ಞಾನ<br>ಮೆಂಟಲ್ ಎಬಿಲಿಟಿ<br>ಕಂಪ್ಯೂಟರ್ ಜ್ಞಾನ | **100** |
| 2 | **ಕಲಾ ಶಿಕ್ಷಕರು** | **<u>ಎರಡನೇ ಪ್ರಶ್ನೆ ಪತ್ರಿಕೆ</u>**<br>ಇತಿಹಾಸ, ಭೂಗೋಳ ಶಾಸ್ತ್ರ, ಅರ್ಥಶಾಸ್ತ್ರ ಪೌರನೀತಿ | **100** |
| 3 | **ಭಾಷಾ ಶಿಕ್ಷಕರ ಹುದ್ದೆಗಳಿಗೆ** | ಕನ್ನಡ / ಇಂಗ್ಲೀಷ್/ ಹಿಂದಿ/ ಸಂಸ್ಕೃತ/ಉರ್ದು | **100** |
| 4 | **ಫಿಸಿಕಲ್ ಸೈನ್ಸ್ ( ಭೌತ ವಿಜ್ಞಾನ )** | ಭೌತ ಶಾಸ್ತ್ರ ಮತ್ತು ಗಣಿತ ಶಾಸ್ತ್ರ | **100** |
| 5 | **ಬಯಾಲಾಜಿಕಲ್ ಸೈನ್ಸ್ (ಜೀವ ವಿಜ್ಞಾನ )** | ರಸಾಯನ ಶಾಸ್ತ್ರ, ಪ್ರಾಣಿ ಶಾಸ್ತ್ರ, ಸಸ್ಯಶಾಸ್ತ್ರ | **100** |
| 6 | **ದೈಹಿಕ ಶಿಕ್ಷಣ ಗ್ರೇಡ್–1 ಶಿಕ್ಷಕರು** | ದೈಹಿಕ ಶಿಕ್ಷಣದ ಇತಿಹಾಸ, ತತ್ವಗಳು ಮತ್ತು ತತ್ವಜ್ಞಾನ, ದೈಹಿಕ ಶಿಕ್ಷಣದ ಆಡಳಿತ ಮತ್ತು ಸಂಘಟನೆ, ದೈಹಿಕ ಶಿಕ್ಷಣದ ಮನೋಜ್ಞಾನ ಸಾಮಾಗ್ರಿ ಮತ್ತು ಬೋಧನಾ ವಿಧಾನ, ಅಂಗರಚನಾಶಾಸ್ತ್ರ ಅಂಗಕಾರ್ಯಶಾಸ್ತ್ರ ಮತ್ತು ಜೀವಶಾಸ್ತ್ರ, ಆರೋಗ್ಯ ಶಿಕ್ಷಣ, ಸುರಕ್ಷಣಾ ಶಿಕ್ಷಣ ಮತ್ತು ಅಂಗೆಲಸ ವ್ಯಾಯಮ, ಕ್ರೀಢಾಧಿಕಾರತ್ವ ಮತ್ತು ಕ್ರೀಡಾ ತರಬೇತಿ ತತ್ವಗಳು | **100** |

**<u>ಪ್ರಶ್ನೆಗಳ ವ್ಯಾಪ್ತಿ ಹಾಗೂ ಸ್ವರೂಪ:</u>** 1) ಪ್ರಶ್ನೆಗಳು ನಿಗದಿಪಡಿಸಲಾಗಿರುವ ಪಠ್ಯವಸ್ತುವಿನ ವ್ಯಾಪ್ತಿಯಲ್ಲಿರುತ್ತದೆ.

2) ಪ್ರಶ್ನೆಗಳು ವಸ್ತುನಿಷ್ಠವಾಗಿದ್ದು ಪ್ರತಿ ಪ್ರಶ್ನೆಗೆ ಒಂದು ಅಂಕ ನಿಗದಿಪಡಿಸಿದೆ.

3) ಪ್ರತಿ ಪ್ರಶ್ನೆ 4 ಉತ್ತರಗಳನ್ನು ಹೊಂದಿದ್ದು ಇವುಗಳಲ್ಲಿ ಒಂದು ಸರಿ ಉತ್ತರವಾಗಿರುತ್ತದೆ.

4) ಉತ್ತರಗಳನ್ನು **"ಓ.ಎಂ.ಆರ್."** ಶೀಟಿನಲ್ಲಿ ಗುರ್ತಿಸುವುದು.

**ಭಾಷಾ ವಿಷಯ ಹೊರತುಪಡಿಸಿ ಇತರೆ ಎಲ್ಲಾ ವಿಷಯಗಳ ಪ್ರಶ್ನೆ ಪತ್ರಿಕೆಗಳು ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿರುತ್ತವೆ. ಭಾಷಾ ವಿಷಯಕ್ಕೆ ಸಂಬಂಧಿಸಿದಂತೆ ಆಯಾ ಭಾಷೆಯಲ್ಲಿರುತ್ತವೆ.**

**14.<u>ಆಯ್ಕೆ ವಿಧಾನ:</u>**

ಅಭ್ಯರ್ಥಿಗಳನ್ನು **"<u>ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ (ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್) (ರಿಕ್ರೂಟ್‌ಮೆಂಟ್) (ಅಮೆಂಡ್‌ಮೆಂಟ್) ರೂಲ್ಸ್ 2002</u>"** ನಿಯಮಗಳ ಅನ್ವಯ ಮೆರಿಟ್ ಮತ್ತು ಕರ್ನಾಟಕ ಸರ್ಕಾರದ ಪ್ರಚಲಿತ ಮೀಸಲಾತಿ ನಿಯಮಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**15.<u>ಅರ್ಹತೆ ನಿರ್ಧರಿಸುವುದು:–</u>**

**ಅ) <u>ಪ್ರೌಢಶಾಲಾ ಸಹಾಯಕ ಶಿಕ್ಷಕ ಗ್ರೇಡ್–2 ವೃಂದ (ಕಲಾ, ಭೌತ ವಿಜ್ಞಾನ, ಜೀವ ವಿಜ್ಞಾನ ಮತ್ತು ಭಾಷೆಗಳು) ಶಿಕ್ಷಕರ ವಿವಿಧ ಮಾಧ್ಯಮದ ಹುದ್ದೆಗಳಿಗೆ:–</u>**

ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಪಡೆದ ಒಟ್ಟು ಅಂಕಗಳ ಶೇಕಡ **70%,** ಮತ್ತು ಬಿ.ಎ/ಬಿ.ಎಸ್ಸಿ. ಪದವಿ ಪರೀಕ್ಷೆಯ ಒಟ್ಟು ಅಂಕಗಳ ಶೇಕಡ **20%,** ಹಾಗೂ ಬಿ.ಎಡ್. ಪದವಿ ಪರೀಕ್ಷೆಯಲ್ಲಿ ಪಡೆದಿರುವ ಒಟ್ಟು ಅಂಕಗಳ ಶೇಕಡ **10%,** ರಷ್ಟು, ಈ ಮೂರು ಒಟ್ಟು ಅಂಕಗಳ ಮೇಲೆ ಮೆರಿಟ್ ಪಟ್ಟಿ ತಯಾರಿಸಿ, ಪ್ರಚಲಿತ ಮೀಸಲಾತಿ ನಿಯಮಗಳ ಅನ್ವಯ ಆಯ್ಕೆ ಮಾಡಲಾಗುವುದು.

ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ 70% ಗೆ ಅಂಕಗಳನ್ನು ಲೆಕ್ಕಾಚಾರ ಮಾಡುವಾಗ ಪ್ರಥಮ ಪತ್ರಿಕೆ ಹಾಗೂ ದ್ವಿತೀಯ ಪತ್ರಿಕೆಯಲ್ಲಿ ಪಡೆದ ಅಂಕಗಳನ್ನು ಪ್ರತ್ಯೇಕವಾಗಿ ಲೆಕ್ಕಾಚಾರ ಮಾಡಿ ಶೇಕಡವಾರು ಅಂಕಗಳನ್ನು ನಿಗಧಿಪಡಿಸಲಾಗುವುದು. ಈ ರೀತಿ ನಿಗಧಿಪಡಿಸಲಾದ ಎರಡು ಪತ್ರಿಕೆಗಳ ಶೇಕಡವಾರು ಅಂಕಗಳನ್ನು ಕೂಡಿಸಿ ಅವುಗಳ ಸರಾಸರಿ ಅಂಕಗಳನ್ನು ತೆಗೆದುಕೊಳ್ಳಲಾಗುವುದು.

ಮೇಲ್ಕಂಡಂತೆ ಮೆರಿಟ್ ಲಿಸ್ಟ್ ತಯಾರಿಸುವಾಗ ಅಭ್ಯರ್ಥಿಯು **ಸರ್ಕಾರಿ ಪ್ರೌಢ ಶಾಲೆಗಳಲ್ಲಿ** ಸಂಬಂಧಿಸಿದ ವಿಷಯದಲ್ಲಿ "ಅರೆಕಾಲಿಕ ಅಥವಾ ಗೌರವ" ಶಿಕ್ಷಕರಾಗಿ, ಅಥವಾ ಭಾರತೀಯ ಜನಗಣತಿ ಸಂಸ್ಥೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಸಕ್ಷಮ ಪ್ರಾಧಿಕಾರದಿಂದ ನೇಮಕಗೊಂಡು ಹಾಲಿ ಸೇವೆ ಸಲ್ಲಿಸುತ್ತಿದ್ದಲ್ಲಿ / ಸೇವೆ ಸಲ್ಲಿಸಿದ್ದಲ್ಲಿ ಹಾಗೆ ಸೇವೆ ಸಲ್ಲಿಸಿದ ಪೂರ್ಣಗೊಂಡ ಪ್ರತಿ ಒಂದು ವರ್ಷದ ಸೇವೆಗೆ ಶೇಕಡ **2%** ರಷ್ಟು ಕೃಪಾಂಕಗಳನ್ನು ನೇಮಕಾತಿ ನಿಯಮಗಳ ಪ್ರಕಾರ ಅರ್ಹತೆ ಇದ್ದಲ್ಲಿ ಮಾತ್ರ ಮೇಲಿನ ಕಂಡಿಕೆಯಲ್ಲಿ ವಿವರಿಸಿರುವ ಒಟ್ಟು ಅಂಕಗಳಿಗೆ ಸೇರಿಸಲಾಗುವುದು.

**<u>ವಿವರಣೆ:</u>–ಅ)** ಮೊದಲಿಗೆ, ಬಿ.ಎ/ಬಿ.ಎಸ್ಸಿ. ಪದವಿ ಪರೀಕ್ಷೆಯ ಎಲ್ಲಾ ವರ್ಷಗಳಲ್ಲಿ, ಎಲ್ಲಾ ವಿಷಯಗಳಲ್ಲಿ ಪಡೆದಿರುವ ಒಟ್ಟು ಅಂಕಗಳನ್ನು ಶೇಕಡ 20%ಕ್ಕೆ ಲೆಕ್ಕ ಹಾಕಲಾಗುವುದು.

**ಆ)** ಬಿ.ಇಡಿ., ಪದವಿ ಪರೀಕ್ಷೆಯಲ್ಲಿ ಪಡೆದ ಒಟ್ಟು ಅಂಕಗಳನ್ನು ಶೇಕಡ 10%ಕ್ಕೆ ಲೆಕ್ಕ ಹಾಕಲಾಗುವುದು.

**ಇ)** ನಂತರ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಪಡೆದ ಒಟ್ಟು ಅಂಕಗಳನ್ನು ಶೇಕಡ 70%ಕ್ಕೆ ಲೆಕ್ಕ ಹಾಕಲಾಗುವುದು.

**ಈ)** ಬಿ.ಎ/ಬಿ.ಎಸ್ಸಿ/ಬ್ಯಾಚುಲರ್ ಪದವಿ/ತತ್ಸಮಾನ ಪರೀಕ್ಷೆಯ ಶೇಕಡ 20%, ಬಿ.ಇಡಿ., ಪದವಿಯ/ಬಿ.ಪಿ.ಇಡಿ.,/ತತ್ಸಮಾನ ಪರೀಕ್ಷೆಯ ಶೇಕಡ 10%, ಮತ್ತು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಶೇಕಡ 70% ಅಂಕಗಳನ್ನು ಸೇರಿಸಿ ಒಟ್ಟು ಶೇಕಡ 100 ಅಂಕಕ್ಕೆ ಪಡೆದ ಅಂಕಗಳನ್ನು ಕಂಡುಕೊಳ್ಳಲಾಗುವುದು. ಮತ್ತು ಮೆರಿಟಿಗೆ ಪರಿಗಣಿಸಲಾಗುವುದು.

**ಉ)** ಮೇಲಿನ ಒಟ್ಟು ಶೇಕಡ ಅಂಕಗಳಿಗೆ (ಪ್ಯಾರ **"ಈ"**), ಅರೆಕಾಲಿಕ ಅಥವಾ ಗೌರವ ಶಿಕ್ಷಕ/ಭಾರತೀಯ ಜನಗಣತಿಯಲ್ಲಿ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸಿದಂತಹ ಅಭ್ಯರ್ಥಿಗಳಿಗೆ ಪ್ರಸ್ತುತ ನೇಮಕಾತಿ ನಿಯಮಗಳ ಪ್ರಕಾರ ಅರ್ಹತೆ ಇದ್ದಲ್ಲಿ ಮಾತ್ರ ಪ್ರತಿ ಪೂರ್ಣಗೊಂಡ ಒಂದು ವರ್ಷದ ಸೇವೆಗೆ ಶೇಕಡ 2% ರಂತೆ ಕೃಪಾಂಕಗಳನ್ನು ಸೇರಿಸಲಾಗುವುದು.

**16. <u>ಮೀಸಲಾತಿ ಅವಕಾಶಗಳು:–</u>**

ಅ) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 08 ಸಹಿಮ 95 ದಿನಾಂಕ 20–06–1995 ಮತ್ತು ನಂತರ ಹಾಲಿ ಜಾರಿಯಲ್ಲಿರುವ ಮೀಸಲಾತಿ ನಿಯಮಗಳ ಪ್ರಕಾರ ಲಭ್ಯವಿರುವ ರಿಕ್ತ ಸ್ಥಾನಗಳನ್ನು ಈ ಕೆಳಕಂಡ ಪ್ರಮಾಣದಲ್ಲಿ ನಿಯಮಾನುಸಾರ ಮೀಸಲಿರಿಸಲಾಗಿದೆ.

| | |
|---|---|
| **ಸಾಮಾನ್ಯ ಅರ್ಹತೆ** | **ಶೇ.** 50 |
| **ಪರಿಶಿಷ್ಟ ಪಂಗಡ** | **ಶೇ.** 03 |
| **ಪರಿಶಿಷ್ಟ ಜಾತಿ** | **ಶೇ.** 15 |
| **ಪ್ರವರ್ಗ–1** | **ಶೇ.** 04 |
| **ಪ್ರವರ್ಗ–2ಎ** | **ಶೇ.** 15 |
| **ಪ್ರವರ್ಗ–2ಬಿ** | **ಶೇ.** 04 |
| **ಪ್ರವರ್ಗ–3ಎ** | **ಶೇ.** 04 |
| **ಪ್ರವರ್ಗ–3ಬಿ** | **ಶೇ.** 05 |
| **ಒಟ್ಟು** | 100 |

**ಮೀಸಲಾತಿ ಸೌಲಭ್ಯ ಪಡೆಯಲು ಅಭ್ಯರ್ಥಿಗಳು ಸಲ್ಲಿಸಬೇಕಾದ ಪ್ರಮಾಣ ಪತ್ರಗಳು:**

| | | |
|---|---|---|
| 1 | ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು | **ನಮೂನೆ– ಡಿ** (ನಿಯಮ 3ಎ(2)(3), ಸರಕಾರದ ಆದೇಶ ಸಂಖ್ಯೆ: ಎಸ್‌ಡಬ್ಲೂಡಿ 132 ಎಸ್‌ಎಡಿ 97 ದಿನಾಂಕ 08–02–2000 |
| 2 | ಹಿಂದುಳಿದ ಪ್ರವರ್ಗ–1 ಕ್ಕೆ ಸೇರಿದ ಅಭ್ಯರ್ಥಿಗಳು | **ನಮೂನೆ–ಇ** (ನಿಯಮ 3ಎ(2)(3), ಸರಕಾರದ ಆದೇಶ ಸಂಖ್ಯೆ: ಎಸ್‌ಡಬ್ಲೂಡಿ 132 ಎಸ್‌ಎಡಿ 97 ದಿನಾಂಕ 08–02–2000 |
| 3 | ಹಿಂದುಳಿದ ಪ್ರವರ್ಗ 2ಎ, 2ಬಿ, 3ಎ, ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳು | **ನಮೂನೆ–ಎಫ್** (ನಿಯಮ 3ಎ(2)(3), ಸರಕಾರದ ಆದೇಶ ಸಂಖ್ಯೆ: ಎಸ್‌ಡಬ್ಲೂಡಿ 126 ಎಸ್‌ಎಡಿ 97 ದಿನಾಂಕ 13–02–2003 |

ಅಭ್ಯರ್ಥಿಗಳು ಮೇಲೆ ನಿಗದಿಪಡಿಸಿರುವ ನಿಗದಿತ ನಮೂನೆಗಳಲ್ಲಿಯೇ ಸಂಬಂಧಿಸಿದ ವ್ಯಾಪ್ತಿಯ ತಹಸೀಲ್ದಾರರ ದರ್ಜೆಗಿಂತ ಕಡಿಮೆ ಇಲ್ಲದ ರೆವಿನ್ಯೂ ಪ್ರಾಧಿಕಾರಿಯಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

**ಮೇಲ್ಕಂಡ ಮೀಸಲಾತಿ ಪ್ರಮಾಣ ಪತ್ರಗಳು ಚಾಲ್ತಿಯಲ್ಲಿರುವ ನಿಯಮಗಳ ಪ್ರಕಾರವಿರಬೇಕು ಮತ್ತು ಅವಧಿ ಮೀರಿದ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು.**

ಆ) ಮೇಲೆ ವಿವರಿಸಿರುವ ಪ್ರಕಾರ ಸಾಮಾನ್ಯ ಅರ್ಹತೆ ಸೇರಿದಂತೆ ಪ್ರತಿ ಮೀಸಲಾತಿ ಪ್ರವರ್ಗಗಳಿಗೆ ಈ ಕೆಳಕಂಡ ಆದೇಶಗಳ ಪ್ರಕಾರ "**ಸಮತಳ ಮೀಸಲಾತಿ**" (Horizontal reservation) ಅನ್ವಯ ಹುದ್ದೆಗಳನ್ನು ವರ್ಗೀಕರಿಸಲಾಗಿದೆ.

| | | | |
|---|---|---|---|
| 1 | ಮಾಜಿ ಸೈನಿಕರಿಗೆ | ಶೇಕಡ 10 | ಕರ್ನಾಟಕ ಸಿವಿಲ್ ಸರ್ವೀಸಸ್ (ಜನರಲ್ ರೆಕ್ರೂಟ್‌ಮೆಂಟ್) ರೂಲ್ಸ್ 1977ರ ನಿಯಮ 9(1)ರ ಅನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002.ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:–04–01–2008 |
| 2 | ಅಂಗವಿಕಲರಿಗೆ | ಶೇಕಡ 5 | ಕರ್ನಾಟಕ ಸಿವಿಲ್ ಸರ್ವೀಸಸ್ (ಜನರಲ್ ರೆಕ್ರೂಟ್‌ಮೆಂಟ್) ರೂಲ್ಸ್ 1977 ನಿಯಮ 9(1)(ಎ)ರ ಅನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002. ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:–04–01–2008 |
| 3 | ಮಹಿಳಾ ಅಭ್ಯರ್ಥಿಗಳಿಗೆ | ಶೇಕಡ 30 | ಕರ್ನಾಟಕ ಸಿವಿಲ್ ಸರ್ವೀಸಸ್ (ಜನರಲ್ ರೆಕ್ರೂಟ್‌ಮೆಂಟ್) ರೂಲ್ಸ್ 1977ರ ನಿಯಮ 9(1)(ಬಿ) ಮತ್ತು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002. ಹಾಗೂ ಸರ್ಕಾರದ ಸುತ್ತೋಲೆ ಸಂಖ್ಯೆ ಸಿಆಸುಇ 16/ಸೇನೇನಿ 2008 ದಿನಾಂಕ 01–09–2008 ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007ದಿನಾಂಕ:–04–01–2008 |
| 4 | ಯೋಜನೆಗಳಿಂದ ನಿರಾಶ್ರಿತರಾದವರ ಕುಟುಂಬದವರ ಅಭ್ಯರ್ಥಿಗಳಿಗಾಗಿ | ಶೇಕಡ 5 | ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 23 ಎಸ್‌ಆರ್‌ಆರ್ 99 ದಿನಾಂಕ 23–11–2000 ಮತ್ತು ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002 ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:–04–01–2008 |
| 5 | ಗ್ರಾಮೀಣ ಅಭ್ಯರ್ಥಿಗಳಿಗೆ | ಶೇಕಡ 25 | 2000ದ ಕರ್ನಾಟಕ ಗ್ರಾಮೀಣ ಅಭ್ಯರ್ಥಿಗಳಿಗಾಗಿ (ರಾಜ್ಯ ಸಿವಿಲ್ ಸೇವೆಗಳಲ್ಲಿ ನೇಮಕಾತಿ ಅಥವಾ ಹುದ್ದೆಗಳ ಮೀಸಲಾತಿ ವಿಧೇಯಕ) ಹಾಗೂ ಸರಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002 ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:–04–01–2008 |
| 6 | ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗಾಗಿ | ಶೇಕಡ 5 | ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 71 ಎಸ್‌ಆರ್‌ಆರ್ 2001 ದಿನಾಂಕ 24–10–2002 ಮತ್ತು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002 ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:–04–01–2008 |

**17. ಮಾಜಿ ಸೈನಿಕರ ಗುಂಪಿನಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳಿಗೆ ಸೂಚನೆಗಳು:**

**"ಮಾಜಿ ಸೈನಿಕ"ರಿಗಾಗಿ ಮೀಸಲಿಟ್ಟ ಖಾಲಿ ಹುದ್ದೆಗಳನ್ನು ಮಿಲಿಟರಿ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿಗಳಿಂದ ಮತ್ತು ಭಾರತ ದೇಶದ ಒಕ್ಕೂಟದ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ಅಂಗಹೀನರಾದ ವ್ಯಕ್ತಿಗಳ ಕುಟುಂಬದ ಸದಸ್ಯರಿಂದ ನೇಮಕಾತಿ ಮೂಲಕ ತುಂಬಲಾಗುತ್ತದೆ.**

**ಮಾಜಿ ಸೈನಿಕರ ಗುಂಪಿನಲ್ಲಿ ಕೆಳಕಂಡವರು ಆಯ್ಕೆಗೆ ಅರ್ಹರು:–**

**1)** ಮಾಜಿ ಸೈನಿಕ ಎಂದರೆ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಅಯೋಧನಾಗಿ) ಸೇವೆ ಸಲ್ಲಿಸಿದ ವ್ಯಕ್ತಿ. ಅಂದರೆ:–

(ಅ) ಅಂತಹ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ ವ್ಯಕ್ತಿ.

**ಅಥವಾ**

(ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಗೆ ಅನರ್ಹನಾದವನೆಂದೋ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಸೇವೆಯಿಂದ ಬಿಡುಗಡೆಯಾದ ವ್ಯಕ್ತಿ.

**ಅಥವಾ**

(ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

**ಅಥವಾ**

(ಈ) ತನ್ನ ಸ್ವಂತ ಕೋರಿಕೆಯ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದು ಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ದಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ.

**2) <u>ಮಾಜಿ ಸೈನಿಕ ಅವಲಂಬಿತರ ಗುಂಪಿನಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳು ಅಂದರೆ:–</u>**

ಕೇಂದ್ರ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು.

**(ಸಂಬಂಧಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು ಮಾಜಿ ಸೈನಿಕರ ಅವಲಂಬಿತರಡಿಯಲ್ಲಿ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ ಅಂತಹವರಿಗೆ ವಯೋಮಿತಿ ಸಡಿಲಿಕೆ ಇಲ್ಲ)**

**3) <u>ಮಾಜಿ ಸೈನಿಕ ಗುಂಪಿನಲ್ಲಿ ಆಯ್ಕೆ ಹೊಂದಲು ಈ ಕೆಳಕಂಡವರು ಅರ್ಹರಲ್ಲ:</u>**

ಅ) ಈ ಸೌಲಭ್ಯಕ್ಕೆ ಡಿಫೆನ್ಸ್ ಸೆಕ್ಯುರಿಟಿ ಕೋರ್ಸ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಕೋರ್ಸ್ ಲೋಕ ಸಹಾಯಕ ಸೇವೆ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಅರ್ಹರಲ್ಲ.

ಆ) ಕೇಂದ್ರ ಸಶಸ್ತ್ರದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಪುನರ್ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ, ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗೆ ನೇಮಕ ಹೊಂದುವಂತಿಲ್ಲ.

**<u>ಸೂಚನೆ:</u>**

**"ಮಾಜಿ ಸೈನಿಕ" "ಸಶಸ್ತ್ರ ದಳದ ಸದಸ್ಯ" ಮತ್ತು "ಕುಟುಂಬದ ಸದಸ್ಯ"** ಎಂಬ ಪದಗಳ ಅರ್ಥವು ಕಾಲದಿಂದ ಕಾಲಕ್ಕೆ ತಿದ್ದುಪಡಿಯಾದ **<u>ಕರ್ನಾಟಕ ರಾಜ್ಯ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977</u>** ರಲ್ಲಿ ವಿವರಿಸಿರುವಂತೆ ಇರುತ್ತದೆ.

18. **<u>ಅಂಗವಿಕಲ ಅಭ್ಯರ್ಥಿಗಳಿಗೆ ಸೂಚನೆ:–</u>**

ಕರ್ನಾಟಕ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಎಂಎಂಡಬ್ಲ್ಯೂ. 107. ಪಿಹೆಚ್‌ಪಿ 2003 ದಿನಾಂಕ: 11–07–2003 ಮತ್ತು ಡಿಪಿಎಆರ್ 50 ಎಸ್‌ಆರ್‌ಆರ್ 2000 ದಿನಾಂಕ: 03–09–2005ರ ಅನ್ವಯ ತಾನು **<u>"ಅಂಗವಿಕಲರ ಗುಂಪಿಗೆ ಸೇರಿದವರೆಂದು ಹೇಳಿಕೊಳ್ಳುವ ಅಭ್ಯರ್ಥಿಯು"</u>** ವೈದ್ಯಕೀಯ ಪ್ರಮಾಣ ಪತ್ರವನ್ನು ಹೊಂದಿರಬೇಕು. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್.ಸಿಆಸುಇ 50 ಎಸ್.ಆರ್.ಆರ್. 2007, ದಿನಾಂಕ 26–07–2011ರಲ್ಲಿ ನಿಗದಿಪಡಿಸಿರುವ ಅಂಗವಿಕಲ ಅಭ್ಯರ್ಥಿಗಳನ್ನು ಮಾತ್ರ ಪರಿಗಣಿಸಲಾಗುವುದು. ಸರ್ಕಾರಿ ಆದೇಶ ಸಂಖ್ಯೆ ಎಂ.ಎ.ಇ107 /ಪಿ.ಹೆಚ್.ಪಿ /2003 ದಿನಾಂಕ 11/7/2003 ರಲ್ಲಿ ನಿಗಧಿಪಡಿಸಿರುವ ನಮೂನೆಯಲ್ಲಿ ವೈದ್ಯಕೀಯ ಪ್ರಮಾಣ ಪತ್ರಗಳನ್ನು ಸಕ್ಷಮ ಜಿಲ್ಲಾ ವೈದ್ಯಕೀಯ ಮಂಡಳಿಯಿಂದ ಪಡೆದಿರಬೇಕು. ಈ ಪ್ರಮಾಣ ಪತ್ರವನ್ನು ಅರ್ಜಿ ಸಲ್ಲಿಸುವ ದಿನಾಂಕಕ್ಕೆ ಅಭ್ಯರ್ಥಿಯು ಪಡೆದುಕೊಂಡಿರಬೇಕು.

ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 50 ಎಸ್.ಆರ್.ಆರ್ 2007 ದಿನಾಂಕ: 26.07.2011 ರಲ್ಲಿ ರಾಜ್ಯ ಸರ್ಕಾರವು ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಅಂಗವಿಕಲರು ನಿರ್ವಹಿಸಬಹುದಾದ ಹುದ್ದೆಗಳನ್ನು ಗುರುತಿಸಿದೆ. ಸದರಿ ಅಧಿಸೂಚನೆಯಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ಅಂಗವಿಕಲ ಅಭ್ಯರ್ಥಿಗಳಿಗೆ ಗುರುತಿಸಿರುವ ಹುದ್ದೆಗಳ ಉದ್ಧೃತ ಭಾಗವನ್ನು ಈ ಕೆಳಗೆ ನೀಡಲಾಗಿದೆ.

| Blind | Low Vision | Leprosy Cured | Hearing Impaired | Locomotor Disablity | Mentally ill | Mentally Retarded |
|---|---|---|---|---|---|---|
| Primary School Music Teacher,<br>Secondary School Asistant Grade-II, Asistant Masters-(Arts) (Languages)<br>Special Teacher Grade-II, Drama Teachers, Dance Teachers, Music Teachers.<br>FDA, SDA | Primary School Music Teacher,<br>Asst.Masters-(General) (English) (Hindi)<br>Secondary School Asistant Grade-II, Asistant Masters-(Arts) (Languages)<br>Special Teacher Grade-II, Drama Teachers, Dance Teachers, Music Teachers.<br>FDA, SDA, Group D Posts, Peon. | Primary School Assistant Masters (General) (Science)<br>(English) (Hindi) Drawing Teacher<br>Secondary School Asistant Grade-II Asistant Masters-(Arts) (Physical Science) (Biological Science) (Languages)<br>Special Teacher Grade-II, Drawing Teachers, Drama Teachers, Dance Teachers, Craft Teachers, Music Teachers.<br>FDA, SDA, Typist, Steno & Group D. | Primary School Asst.Masters-(General) (English) (Hindi) Drawing Teachers.<br>Secondary School Asistant Grade-II,<br>Assistant Masters (Languages) Physical Education Teacher Grade-1,<br>Special Teacher Grade-II, Drawing Teachers, Drama Teachers, Dance Teachers, Craft Teachers.<br>FDA, SDA, Typist, Group D. | Primary School Asst.Masters-(General)<br>(Science)<br>(English) (Hindi) Drawing Teachers.<br>Secondary School Asistant Grade-II, Asistant Masters-(Arts) (Physical Science) (Biological Science) (Languages)<br>Special Teacher Grade-II, Drawing Teachers, Drama Teachers, Dance Teachers, Craft Teacghers, Music Teachers.<br>FDA, SDA,<br>Typist, Steno & Group D posts. | FDA,<br>SDA,<br>Group-D Posts. | - |

1. ದೈಹಿಕ ಅಂಗವಿಕಲ ಅಭ್ಯರ್ಥಿಗಳು ಸರ್ಕಾರಿ ಜಿಲ್ಲಾ ಆಸ್ಪತ್ರೆಗಳಲ್ಲಿರುವ ಮೂಳೆ ತಜ್ಞ (Orthopaedic Surgeon) ರಿಂದ ದೈಹಿಕ ಅಂಗವಿಕಲತೆಯ ಮೌಲೀಕರಣವನ್ನು Alimco Kanpur( W.H.O Standard) ಇದರ ಆಧಾರದ ಮೇಲೆ ಮಾಡಿಸುವುದು ಕಡ್ಡಾಯವಾಗಿರುತ್ತದೆ. ಹಾಗೂ ಶ್ರವಣ ಧೋಷ ಹೊಂದಿರುವ ಅಂಗವಿಕಲ ಅಭ್ಯರ್ಥಿಗಳ ಪ್ರಮಾಣ ಪತ್ರದಲ್ಲಿ ಶ್ರವಣ ದೋಷದ ಪ್ರಮಾಣವನ್ನು ಡೆಸಿಬಲ್ಸ್ (Decibel) ಗಳಲ್ಲಿ ಕಡ್ಡಾಯವಾಗಿ ನಮೂದಿಸತಕ್ಕದ್ದು.

2. ಅಂಧ ಮತ್ತು ಮಂದ ದೃಷ್ಟಿಯ ಅಭ್ಯರ್ಥಿಗಳ ಅಂಗವಿಕಲತೆಯ ಕುರಿತು ಈ ಕೆಳಗಿನಂತೆ ವಿವರಿಸಲಾಗಿದೆ.

**VISUAL DISABILITY**

1.Definition: Blindness refers to a condition where a person suffers from any of the condition , namely

i) total absence of sight: or

ii) visual acuity not exceeding 6/60 of 20/200 (snellen) in the better eye with best correcting lenses: or

iii) Limitation of field of vision subtending an angle of 20 degree or worse :

2. **Low Vision**: Persons with low vision means a person with a impairment of vision of less than 6/18 to 6/60 with best correction in the better eye of impairment of field in anyone of the following categories:-

a) reduction of fields less than 50 degrees

b) Heminaopia with macular involvement

c) Altitudinal defect involving lower fields.

3. Categories of Visual Disability All with Correction

| Category | Better Eye | Worse eye | % age impairment |
|---|---|---|---|
| Category 0 | 6/9-6/18 | 6/24 to 6/36 | 20% |
| Category I | 6/18-6/36 | 6/60 to Nil | 40% |
| Category II | 6/40-4/60 Or Field Of vision 10*-20* | 3/60 to Nil | 75% |
| Category III | 3/60 to 1/60 or Field Of vision 10* | F:C at 1 ft to Nil | 100% |
| Category IV | F:C at 1 ft to Nil or Field Of vision 10* | F:C at 1 ft to Nil | 100% |
| One Eyed Persons | 6/6 | F:C at 1 ft to Nil or Field Of vision 10* | 30% |

Note: F:C Means Finger Count

19. **ಗ್ರಾಮೀಣ ಅಭ್ಯರ್ಥಿಗಳಿಗೆ ಸೂಚನೆಗಳು :–**

ಗ್ರಾಮೀಣ ಅಭ್ಯರ್ಥಿ ಎಂದರೆ ಕರ್ನಾಟಕ ಪೌರ ನಿಯಮಗಳ ಅಧಿನಿಯಮ 1976 ಅಥವಾ ಕರ್ನಾಟಕ ಪೌರ ಸಭೆಗಳ ಅಧಿನಿಯಮ 1964 ರಡಿಯಲ್ಲಿ ನಿರ್ದಿಷ್ಟಪಡಿಸಿದ ಒಂದು ದೊಡ್ಡ ನಗರ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆ ಹಂತದಲ್ಲಿರುವ ಪ್ರದೇಶ ಹೊರತಾಗಿ ಇತರೆ ಯಾವುದೇ ಪ್ರದೇಶದಲ್ಲಿರುವ ಶಾಲೆಯಲ್ಲಿ 1 ನೇ ತರಗತಿಯಿಂದ 10 ನೇ ತರಗತಿಯವರೆಗೆ ವ್ಯಾಸಂಗ ಮಾಡಿದ ಅಭ್ಯರ್ಥಿ.

ಗ್ರಾಮೀಣ ಅಭ್ಯರ್ಥಿಗಳ ಮೀಸಲಾತಿ ಅಡಿಯಲ್ಲಿ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಸಂಬಂಧಿಸಿದ ಪ್ರಮಾಣ ಪತ್ರಗಳನ್ನು **ಸರಕಾರದ ಆದೇಶ ಸಂಖ್ಯೆ: ಡಿಪಿಎಆರ್ 96 ಸೇನೆನಿ 2005 ದಿನಾಂಕ 10–08–2005** ರಲ್ಲಿ ನೀಡಿರುವ ನಿಗದಿತ ನಮೂನೆಯಲ್ಲಿ ಮಾತ್ರ ಸಲ್ಲಿಸಬೇಕು.

ಸದರಿ ಅಧಿನಿಯಮದಲ್ಲಿ **"ಗ್ರಾಮೀಣ ಅಭ್ಯರ್ಥಿಯನ್ನು"** ಈ ಕೆಳಗೆ ಉದ್ಧರಿಸಿದಂತೆ ಪರಿಭಾಷಿಸಲಾಗಿದೆ.

1) ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ–1 ರಲ್ಲಿ ಅಂದರೆ, ಮೇಲುಸ್ತರದಲ್ಲಿ (**creamy layer**) ಬರುವದಿಲ್ಲವೆಂದು ಸಂಬಂಧಿಸಿದ ತಹಸೀಲ್ದಾರರವರಿಂದ ಪಡೆದ ಪ್ರಮಾಣ ಪತ್ರದ ಜೊತೆಗೆ ಸರಕಾರದ ಆದೇಶ ದಿನಾಂಕ 10–08–2005ರಲ್ಲಿ ನಿಗದಿಪಡಿಸಲಾದ ನಮೂನೆ–2 ರಲ್ಲಿ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

2) ಪ್ರವರ್ಗ–1, 2ಎ, 2ಬಿ, 3ಎ, 3ಬಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು ತಮ್ಮ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ಸರಕಾರದ ಆದೇಶ ದಿನಾಂಕ 10–08–2005ರಲ್ಲಿ ನಿಗದಿ ಪಡಿಸಲಾದ ನಮೂನೆ–2ರಲ್ಲಿ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಪಡೆದಿರಬೇಕು.

20. **ಯೋಜನಾ ನಿರಾಶ್ರಿತ ಕುಟುಂಬದ ಅಭ್ಯರ್ಥಿಗಳಿಗೆ ಸೂಚನೆಗಳು :–**

ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್.23.ಎಸ್‌ಆರ್‌ಆರ್.99, ಬೆಂಗಳೂರು ದಿನಾಂಕ 23–11–2000 ರನ್ವಯ ಯೋಜನಾ ನಿರಾಶ್ರಿತ ಕುಟುಂಬದ ಅಭ್ಯರ್ಥಿ ಮೀಸಲಾತಿ ಪಡೆಯಲಿಚ್ಛಿಸುವ ಅಭ್ಯರ್ಥಿಗಳು ಸರ್ಕಾರಿ ಸುತ್ತೋಲೆ ಸಂಖ್ಯೆ: ಸಿ.ಆ.ಸು.ಇ.:44:ಸೇ.ನೇನಿ ದಿನಾಂಕ:27–07–2001ರಲ್ಲಿ ನಿಗದಿಪಡಿಸಲಾದ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರ(ತಹಶೀಲ್ದಾರ್)ದಿಂದ ಅರ್ಜಿ ಸಲ್ಲಿಸುವ ಕೊನೆ ದಿನಾಂಕದೊಳಗೆ ಪಡೆದಿರಬೇಕು.

21. **ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗೆ ಸೂಚನೆಗಳು:–**

1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳು ಈ ಮೀಸಲಾತಿಗೆ ಅರ್ಹರಾಗುತ್ತಾರೆ. (1ನೇ ತರಗತಿಗೆ ದಾಖಲಾಗದೇ ನೇರವಾಗಿ ನಂತರದ ಹೆಚ್ಚಿನ ತರಗತಿಗೆ ದಾಖಲಾಗಿ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ್ದಲ್ಲಿ ಸಹ ಈ ಸೌಲಭ್ಯಕ್ಕೆ ಅರ್ಹರಾಗುವರು) ಈ ಅಭ್ಯರ್ಥಿಗಳು ಸಂಬಂಧಿಸಿದ ಮುಖ್ಯೋಪಾಧ್ಯಾಯರಿಂದ ದೃಢೀಕೃತ ಪ್ರಮಾಣ ಪತ್ರಗಳನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳವರ ಮೇಲು ಸಹಿಯೊಂದಿಗೆ ಸಲ್ಲಿಸತಕ್ಕದ್ದು. ಪ್ರಮಾಣ ಪತ್ರಗಳನ್ನು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು.

22. **ಎ) ಗೌರವ ಶಿಕ್ಷಕರ ಪ್ರಮಾಣ ಪತ್ರ:**

ಸರ್ಕಾರಿ ಪ್ರೌಢಶಾಲೆಗಳಲ್ಲಿ ಗೌರವ ಶಿಕ್ಷಕರಾಗಿ ಸಲ್ಲಿಸಿದ ಸೇವಾ ಅವಧಿಗೆ ಕೃಪಾಂಕ ಪಡೆಯಲಿಚ್ಛಿಸುವ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಸಂಬಂಧಿಸಿದ ಶಾಲೆಯ ಮುಖ್ಯಸ್ಥರಿಂದ ಪ್ರಮಾಣ ಪತ್ರವನ್ನು ಪಡೆದು, ಆಯಾ ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಜಿಲ್ಲಾ ಉಪನಿರ್ದೇಶಕರು (ಆಡಳಿತ) ಇವರಿಂದ ದೃಢೀಕರಿಸಿಕೊಂಡಿರಬೇಕು.

**ಬಿ) ಅರೆಕಾಲಿಕ ಶಿಕ್ಷಕರ ಪ್ರಮಾಣ ಪತ್ರ :–**

ಸರ್ಕಾರಿ ಪ್ರೌಢಶಾಲೆಗಳಲ್ಲಿ ಅರೆಕಾಲಿಕ ಶಿಕ್ಷಕರಾಗಿ ಸಲ್ಲಿಸಿದ ಸೇವಾ ಅವಧಿಗೆ ಕೃಪಾಂಕ ಪಡೆಯಲಿಚ್ಛಿಸುವ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಸಂಬಂಧಿಸಿದ ಶಾಲೆಯ ಮುಖ್ಯಸ್ಥರಿಂದ ಪ್ರಮಾಣ ಪತ್ರವನ್ನು ಪಡೆದು, ಆಯಾ ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಜಿಲ್ಲಾ ಉಪನಿರ್ದೇಶಕರು (ಆಡಳಿತ) ಇವರಿಂದ ದೃಢೀಕರಿಸಿಕೊಂಡಿರಬೇಕು.

**23. ಆಯ್ಕೆ ಪ್ರಕ್ರಿಯೇಯ ಪರೀಶೀಲನಾ ಪಟ್ಟಿ 1:2 ರಂತೆ :–**

ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿರುವ ಅಂಕಗಳ ವಿವರ, ಅರ್ಹತಾದಾಯಕ ಪರೀಕ್ಷೆಯಲ್ಲಿ ಪಡೆದಿರುವ ಅಂಕಗಳ ವಿವರ ಹಾಗೂ ಅಭ್ಯರ್ಥಿಯು ಅರ್ಜಿಯಲ್ಲಿ ಕ್ಲೇಮ್ ಮಾಡಿರುವ ಮೀಸಲಾತಿ ವಿವರಗಳನ್ನು ಒಳಗೊಂಡ ಪೂರ್ಣ ಮಾಹಿತಿಯನ್ನು ಇಲಾಖೆಯ ಅಧಿಕೃತ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು. ಅಭ್ಯರ್ಥಿಗಳು ಗಳಿಸಿರುವ ಅಂಕಗಳನ್ನು ಆಧರಿಸಿ ಪ್ರಕಟಿಸಿದ ಹುದ್ದೆಗಳಿಗೆ ಅನುಗುಣವಾಗಿ ಅಭ್ಯರ್ಥಿಗಳ ಮೂಲ ದಾಖಲೆಗಳ ಮೂಲ ದಾಖಲೆಗಳನ್ನು ಪರಿಶೀಲಿಸಲು ದಿನಾಂಕಗಳನ್ನು ಗೊತ್ತುಪಡಿಸಲಾಗುತ್ತದೆ. ಈ ಸಂಬಂದ ವೆಬ್ ಸೈಟ್ ಮತ್ತು ಆಯ್ಕೆ ಮತ್ತು ನೇಮಕಾತಿ ಪ್ರಾಧಿಕಾರಿಗಳ ಪ್ರಕಟಣೆ ಫಲಕವನ್ನು ನೋಡುತ್ತಿರುವುದು. ನಿಗಧಿತ ದಿನಾಂಕಗಳಂದು ಅಭ್ಯರ್ಥಿಯು ಖುದ್ದು ಹಾಜರಾಗಿ ಸ್ಥಳದಲ್ಲಿ ನೀಡುವ ಚೆಕ್ ಲಿಸ್ಟ್ ನಂತೆ ಭರ್ತಿ ಮಾಡಿ ದಾಖಲೆಗಳ ಪರಿಶೀಲನೆಗೆ ತಂಡದ ಮುಖ್ಯಸ್ಥರಿಗೆ ದಾಖಲೆಗಳನ್ನು ಸಲ್ಲಿಸಿ ಸ್ವೀಕೃತಿ ಪಡಯುವುದು. ಈ ಪ್ರಕ್ರಿಯೆಯ ನಂತರ ಅಭ್ಯರ್ಥಿಗಳು ದೊರೆಯದೇ ಹೋದಲ್ಲಿ ನಿಗದಿತ ಸಂಖ್ಯೆಯ ಮತ್ತು ಪ್ರತಿಶತ 10 ಅಧಿಕ ಸಂಖ್ಯೆಯ ಅಭ್ಯರ್ಥಿಗಳು ದೊರೆಯುವವರೆಗೆ ಮೇಲೆ ಹೇಳಿದ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ. ಹೀಗೆ ಪರಿಶೀಲನೆ ಪ್ರಕ್ರಿಯೆ ಪೂರ್ಣಗೊಂಡ ತರುವಾಯ ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಿಸಲಾಗುವುದು.

**24. ತಾತ್ಕಾಲಿಕ ಆಯ್ಕೆಪಟ್ಟಿ :–**

ಅರ್ಹತೆ (ಮೆರಿಟ್) ಮತ್ತು ಮೀಸಲಾತಿ ನಿಯಮಗಳನ್ವಯ ವಿವಿಧ ವರ್ಗದ ಹುದ್ದೆಗಳಿಗೆ ಅಭ್ಯರ್ಥಿಗಳನ್ನು ಆಯ್ಕೆಮಾಡಿ ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಆಯ್ಕೆ ಪ್ರಾಧಿಕಾರಿಯಾದ ವಿಭಾಗೀಯ ಸಹ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ವಿಭಾಗ, ಬೆಂಗಳೂರು ಇವರ ಕಚೇರಿ ಮತ್ತು ಈ ವಿಭಾಗದ ಎಲ್ಲಾ ಜಿಲ್ಲಾ ಉಪನಿರ್ದೇಶಕರು (ಆಡಳಿತ) ರವರ ಕಚೇರಿಗಳಲ್ಲಿ ಪ್ರಕಟಿಸಲಾಗುವುದು ಹಾಗೂ ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಿಸಿರುವ ಬಗ್ಗೆ ರಾಜ್ಯ ಮಟ್ಟದ ಎರಡು ದಿನಪತ್ರಿಕೆಗಳಲ್ಲಿ ಸಂಕ್ಷಿಪ್ತ ಸೂಚನೆಯನ್ನು ಪ್ರಕಟಿಸಲಾಗುವುದು. ಅಭ್ಯರ್ಥಿಗಳು ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪರಿಶೀಲಿಸಿ ತಮ್ಮ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಮುಂದೆ ತಿಳಿಸುವ ನಿಗದಿತ ದಿನಾಂಕದೊಳಗೆ ಆಕ್ಷೇಪಣೆಗಳನ್ನು ಸಲ್ಲಿಸಬಹುದಾಗಿದೆ. ಈ ದಿನಾಂಕದ ನಂತರ ಸಲ್ಲಿಸುವ ಯಾವುದೇ ಆಕ್ಷೇಪಣೆಗಳನ್ನು ಪರಿಗಣಿಸದೆ ತಿರಸ್ಕರಿಸಲಾಗುವುದು. ನಿಗದಿತ ಸಮಯದೊಳಗೆ ಆಕ್ಷೇಪಣೆಗಳನ್ನು ಸಲ್ಲಿಸದೆ ಇರುವ ಅಭ್ಯರ್ಥಿಗಳು ಅಂತಿಮ ಆಯ್ಕೆ ಪಟ್ಟಿ ಪ್ರಕಟವಾದ ನಂತರ ಯಾವುದೇ ರೀತಿಯ ಪರಿಹಾರಕ್ಕೆ ಅರ್ಹರಾಗುವುದಿಲ್ಲ. ಮತ್ತು ಈ ಬಗ್ಗೆ ವೈಯಕ್ತಿಕವಾಗಿ ಯಾವುದೇ ಅಭ್ಯರ್ಥಿಗೂ ಸೂಚನೆ ನೀಡಲಾಗುವುದಿಲ್ಲ.

**ವಿಶೇಷ ಸೂಚನೆಗಳು:–**

**ತಾತ್ಕಾಲಿಕ ಆಯ್ಕೆಪಟ್ಟಿ ಪ್ರಕಟಿಸಿದ ನಂತರ ಅಭ್ಯರ್ಥಿಗಳು ಆಕ್ಷೇಪಣೆ ಸಲ್ಲಿಸುವಾಗ ಮೂಲ ಅರ್ಜಿಯಲ್ಲಿ ದಾಖಲಿಸಿದ ವಿಷಯಗಳಿಗೆ ಸಂಬಂಧಿಸಿದಂತೆ ಮಾತ್ರ ಆಕ್ಷೇಪಣೆ ಸಲ್ಲಿಸಬಹುದು. (ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ) ನಮೂದಿಸಲು ಬಿಟ್ಟು ಹೋಗಿದ್ದ / ಮರೆತು ಹೋಗಿದ್ದ ಯಾವುದೇ ಮಾಹಿತಿಗಳನ್ನು ಅಂದರೆ ಅಂಕಗಳ ವಿವರ, ಮೀಸಲಾತಿ ಪ್ರವರ್ಗ / ಗೌರವ ಶಿಕ್ಷಕರಾಗಿ / ಅರೆಕಾಲಿಕ ಶಿಕ್ಷಕರಾಗಿ / ಜನಗಣತಿ ಸಂಸ್ಥೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಸೇವೆ ಸಲ್ಲಿಸಿದ ವರ್ಷಗಳ ಬಗ್ಗೆ ಮಾಹಿತಿಗಳು ಇತ್ಯಾದಿ ಆಯ್ಕೆಗೆ ಸಂಬಂಧಿಸಿದ ಮಾಹಿತಿಗಳನ್ನು ಹಾಗೂ ಹೊಸದಾಗಿ ದಾಖಲಿಸಲು ಬಯಸುವ ಯಾವುದೇ ಮಾಹಿತಿಗಳನ್ನು ಸಲ್ಲಿಸಲು ಅವಕಾಶವಿರುವುದಿಲ್ಲ. ಅಂತಹ ಆಕ್ಷೇಪಣೆ ಮತ್ತು ಲಗತ್ತುಗಳನ್ನು ಪರಿಗಣಿಸದೆ ತಿರಸ್ಕರಿಸಲಾಗುವುದು.**

**25. ಅಂತಿಮ ಆಯ್ಕೆ ಪಟ್ಟಿ:–**

1) ತಾತ್ಕಾಲಿಕ ಆಯ್ಕೆಪಟ್ಟಿಯಲ್ಲಿ ಆಯ್ಕೆ ಹೊಂದಿರುವ ಎಲ್ಲಾ ಅಭ್ಯರ್ಥಿಗಳ ಮೂಲ ಅಂಕಪಟ್ಟಿ ಮತ್ತು ಪ್ರಮಾಣ ಪತ್ರಗಳನ್ನು ಪರಿಶೀಲಿಸಿ ದೃಢಪಡಿಸಿಕೊಂಡ ನಂತರ ಅಂತಿಮ ಆಯ್ಕೆಪಟ್ಟಿಯನ್ನು ಪ್ರಕಟಿಸಲಾಗುವುದು. ಮೂಲ ಪ್ರಮಾಣ ಪತ್ರಗಳನ್ನು ಪರಿಶೀಲನೆಗೆ ಸಲ್ಲಿಸದೇ ಇರುವ ಅಭ್ಯರ್ಥಿಗಳು ಅಂತಿಮ ಆಯ್ಕೆಪಟ್ಟಿಯಲ್ಲಿ ಪರಿಗಣನೆಗೆ ಬರುವುದಿಲ್ಲ.

2) ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸುವ ಸಂದರ್ಭದಲ್ಲಿ ಅಭ್ಯರ್ಥಿಗಳು ಅರ್ಜಿಯಲ್ಲಿ ನಮೂದಿಸಿರುವ ಜಿಲ್ಲಾ ಆದ್ಯತೆಯನ್ನು ಆಧಾರವಾಗಿಟ್ಟುಕೊಂಡು ಮೆರಿಟ್ ಮತ್ತು ಮೀಸಲಾತಿ ಆಧರಿಸಿ ನಿಯಮಾನುಸಾರ ಜಿಲ್ಲೆಗಳನ್ನು ಹಂಚಿಕೆ ಮಾಡಲಾಗುತ್ತದೆ.

3) ಜಿಲ್ಲಾ ಮಟ್ಟದ ಆಯ್ಕೆ ಪಟ್ಟಿಯಲ್ಲಿ ಆಯ್ಕೆಯಾದ ಅರ್ಹ ಅಭ್ಯರ್ಥಿಗಳ ಅರ್ಹತೆ ಮತ್ತು ಮೀಸಲಾತಿಗಳನ್ನುನಮ ಖಚಿತಪಡಿಸಿಕೊಂಡು ನೇಮಕಾತಿ ಪ್ರಾಧಿಕಾರಿಯಾದ ಸಂಬಂಧಿಸಿದ ಜಿಲ್ಲಾ ಉಪನಿರ್ದೇಶಕರು (ಆಡಳಿತ) ರವರು ನೇಮಕಾತಿ ಆದೇಶವನ್ನು ಕೌನ್ಸಿಲಿಂಗ್ ಮೂಲಕ ನೀಡುತ್ತಾರೆ.

4) ಆರ್.ಎಂ.ಎಸ್.ಎ ವತಿಯಿಂದ ಉನ್ನತೀಕರಿಸಿದ ಪ್ರೌಢಶಾಲೆಗಳು ಮತ್ತು ಆದರ್ಶ ವಿದ್ಯಾಲಯಗಳಿಗೆ ತೈನಾತಿಸಲ್ಪಟ್ಟ ಶಿಕ್ಷಕರು ಆ ಯೋಜನೆ ಇರುವರೆಗೆ ಅಥವಾ ಆ ಹುದ್ದೆಗಳು ಯೋಜನೇತರ ಹುದ್ದೆಗಳಾಗಿ ಪರಿವರ್ತನೆಯಾಗುವವರೆಗೆ ಯಾವುದು ಮೊದಲೋ ಅಲ್ಲಿಯವರೆಗೆ ಅವರ ವರ್ಗಾವಣೆಯು ಆ ಶಾಲಾ ಘಟಕಗಳಲ್ಲಿ ಆಗುತ್ತದೆ.

**5) ಅಂತಿಮ ಆಯ್ಕೆಪಟ್ಟಿ ತಯಾರಿಸುವಾಗ** ಮಹಿಳೆಯರಿಗೆ ಮೀಸಲಿರಿಸಿದ ರಿಕ್ತ ಸ್ಥಾನಗಳಿಗೆ ಅರ್ಹ ಮಹಿಳಾ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಆಯಾ ವರ್ಗಕ್ಕೆ ಸೇರಿದ ಪುರುಷ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.ಮಾಜಿ ಸೈನಿಕರಿಗಾಗಿ ಮೀಸಲಿರಿಸಿದ ರಿಕ್ತ ಸ್ಥಾನಗಳಿಗೆ ಅರ್ಹ ಮಾಜಿ ಸೈನಿಕ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಅಯಾ ವರ್ಗಕ್ಕೆ ಸೇರಿದ ಇತರೆ ಅರ್ಹ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.ಇದೇ ರೀತಿ ಯೋಜನಾ ನಿರಾಶ್ರಿತ / ಗ್ರಾಮೀಣ ಅರ್ಹ ಅಭ್ಯರ್ಥಿಗಳು ದೊರಯದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಆಯಾ ಪ್ರವರ್ಗಕ್ಕೆ ಸೇರಿದ ಇತರೆ ಅರ್ಹ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.ಅರ್ಹ ಅಂಗವಿಕಲ ಅಭ್ಯರ್ಥಿಗಳು ದೊರೆಯದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಭರ್ತಿ ಮಾಡದೆ ಬ್ಯಾಕ್‌ಲಾಗ್ ಹುದ್ದೆಗಳೆಂದು ಪರಿಗಣಿಸಲಾಗುವುದು.

**26. ನಿಬಂಧನೆಗಳು:–**

1) ಅಭ್ಯರ್ಥಿಯು ಆನ್ ಲೈನ್ ಮೂಲಕ ಸಲ್ಲಿಸಲ್ಪಟ್ಟ ಮೂಲ ಅರ್ಜಿಯಲ್ಲಿ ನೀಡಿರುವ ಮಾಹಿತಿಗಳ ಬದಲಾವಣೆಗೆ ಯಾವುದೇ ಹಂತದಲ್ಲೂ ಅವಕಾಶವಿರುವುದಿಲ್ಲ. ಆದುದರಿಂದ ಅಭ್ಯರ್ಥಿಯು ಅರ್ಜಿ ಸಲ್ಲಿಸುವ ಸಂದರ್ಭದಲ್ಲಿ ಅರ್ಹತೆ, ಮೀಸಲಾತಿ ಹಾಗೂ ಇತರೆ ವಿವರಗಳ ಬಗ್ಗೆ ಖಾತ್ರಿ ಪಡಿಸಿಕೊಂಡು ವಿವರಗಳನ್ನು ದಾಖಲಿಸುವುದು ಅಭ್ಯರ್ಥಿಗಳ ವೈಯಕ್ತಿಕ ಜವಾಬ್ದಾರಿಯಾಗಿರುತ್ತದೆ.

2) ಅಭ್ಯರ್ಥಿಯು ಕೋರುವ ಮೀಸಲಾತಿ ಮತ್ತು ಇತರೆ ಯಾವುದೇ ಸೌಲಭ್ಯಗಳಿಗೆ ಸಂಬಂಧಿಸಿದಂತೆ ಎಲ್ಲಾ ಪ್ರಮಾಣ ಪತ್ರಗಳ ದೃಢೀಕೃತ ಪ್ರತಿಗಳನ್ನು ಅರ್ಜಿ ಸಲ್ಲಿಸಲು ನಿಗಧಿ ಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು. ಸದರಿ ಮೂಲ ಪ್ರಮಾಣ ಪತ್ರಗಳನ್ನು ಆಯ್ಕೆ ಪ್ರಾಧಿಕಾರ/ನೇಮಕಾತಿ ಪ್ರಾಧಿಕಾರ ಸೂಚಿಸಿದ ದಿನದಂದು ಪರಿಶೀಲನೆಗೆ ಹಾಜರುಪಡಿಸಬೇಕು. ಒಂದು ವೇಳೆ ಯಾವುದೇ ಪ್ರಮಾಣ ಪತ್ರಗಳನ್ನು ಹಾಜರು ಪಡಿಸಲು ವಿಫಲರಾದಲ್ಲಿ ಅಂತಹ ಮೀಸಲಾತಿಯನ್ನು ರದ್ದುಪಡಿಸಲಾಗುವುದು.

3) ಅಭ್ಯರ್ಥಿಯು ಅರ್ಜಿ ಸಲ್ಲಿಸುವ ಸಮಯದಲ್ಲಿ ಯಾವುದೇ ಸರ್ಕಾರಿ ಇಲಾಖೆಯಲ್ಲಿ ಖಾಯಂ ಅಥವಾ ಹಂಗಾಮಿಯಾಗಿ ನೌಕರಿಯಲ್ಲಿದ್ದರೆ ಅವನು / ಅವಳು ತಾನು ಸೇವೆ ಸಲ್ಲಿಸುತ್ತಿರುವ ಹುದ್ದೆಯ ನೇಮಕಾತಿ ಪ್ರಾಧಿಕಾರಿಯವರ ಸಮ್ಮತಿಯಿಲ್ಲದೆ ಅರ್ಜಿಯನ್ನು ಸಲ್ಲಿಸಿದ್ದರೆ, ಅಂತಹ ಅಭ್ಯರ್ಥಿ ನೇಮಕಾತಿಗೆ ಅರ್ಹರಾಗುವುದಿಲ್ಲ. ಆದುದರಿಂದ ಸೇವೆಯಲ್ಲಿರುವ ಅಭ್ಯರ್ಥಿಗಳು ಸೇವೆಯಲ್ಲಿರುವ ಬಗ್ಗೆ ಸೇವಾ ಪ್ರಮಾಣ ಪತ್ರ ಮತ್ತು ಸದರಿ ಪ್ರಸ್ತುತ ಹುದ್ದೆಗೆ ಅರ್ಜಿ ಸಲ್ಲಿಸುವ ಬಗ್ಗೆ ಸಂಬಂಧಿಸಿದ ನೇಮಕಾತಿ ಪ್ರಾಧಿಕಾರದಿಂದ ನಿರಾಕ್ಷೇಪಣಾ ಪ್ರಮಾಣ ಪತ್ರವನ್ನು (No objection certificate) ಪಡೆದಿಟ್ಟುಕೊಂಡಿರಬೇಕು.

4) ಅರ್ಜಿ ನಮೂನೆ, ಉತ್ತರ ಪತ್ರಿಕೆ, ಪ್ರವೇಶ ಪತ್ರಗಳ ನಿಗದಿತ ಸ್ಥಳಗಳಲ್ಲಿ ಎಡಗೈ ಹೆಬ್ಬೆಟ್ಟು ಗುರುತನ್ನು ಸ್ಪಷ್ಟವಾಗಿ ಹಾಕಬೇಕು. ಎಡಗೈ ಹೆಬ್ಬೆರಳ ಗುರುತು ರಹಿತ ಅರ್ಜಿಯನ್ನು ಯಾವುದೇ ಸೂಚನೆ ನೀಡದೆ ತಿರಸ್ಕರಿಸಲಾಗುವುದು.

5) ಅಭ್ಯರ್ಥಿಗಳು ಆನ್ ಲೈನ್ ಮೂಲಕ ಅರ್ಜಿ ಸಲ್ಲಿಸಿದ ನಂತರ ಪ್ರವೇಶ ಪತ್ರದ ಪ್ರತಿಯನ್ನು ದ್ವಿಪ್ರತಿಯಲ್ಲಿ ಡೌನ್ ಲೋಡ್ ಮಾಡಿಕೊಳ್ಳುವುದು.

**27. ನ್ಯಾಯಾಲಯ ವ್ಯಾಪ್ತಿ:**

ಬೆಂಗಳೂರು ವಿಭಾಗದ ಶಿಕ್ಷಕರ ನೇಮಕಾತಿಗಳಿಗೆ ಸಂಬಂಧಿಸಿದಂತೆ, ನ್ಯಾಯಾಲಯದ ಪ್ರಕರಣ ದಾಖಲಾದಲ್ಲಿ ನೇಮಕಾತಿ ಪ್ರಾಧಿಕಾರವಾದ ಸಂಬಂಧಿಸಿದ ಉಪನಿರ್ದೇಶಕರು(ಆಡಳಿತ) ಆಯ್ಕೆ ಪ್ರಾಧಿಕಾರವಾದ ವಿಭಾಗೀಯ ಸಹ ನಿರ್ದೇಶಕರು, ಬೆಂಗಳೂರು ವಿಭಾಗ, ಬೆಂಗಳೂರು, ನಿರ್ದೇಶಕರು (ಪ್ರೌಢ ಶಿಕ್ಷಣ),ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಪ್ರತಿಸ್ಪಂದಿಸುವ ಅಧಿಕಾರಿಗಳಾಗಿರುತ್ತಾರೆ.

**28. ಸೂಚನೆಗಳು:**

**ಯಾವುದೇ ವ್ಯಕ್ತಿಯು ಸರ್ಕಾರಿ ನೇಮಕಾತಿಗೆ ಈ ಕೆಳಕಂಡ ಸಂದರ್ಭದಲ್ಲಿ ಅರ್ಹನಾಗುವುದಿಲ್ಲ:**

ಅ) ಯಾವುದೇ ನಿಷೇಧಿತ ಸಂಘ ಸಂಸ್ಥೆಯ ಸದಸ್ಯನಾಗಿರುವಲ್ಲಿ ಅಥವಾ ಸದಸ್ಯರಾಗಿದ್ದಲ್ಲಿ ಅಥವಾ ಯಾವುದೇ ನಿಷೇಧಿತ ಸಂಸ್ಥೆಯ ಕಾರ್ಯ ಚಟುವಟಿಕೆಯಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದಲ್ಲಿ.

ಆ) ಭಾರತ ಸಂವಿಧಾನಕ್ಕೆ ಚ್ಯುತಿ ತರುವ ಕಾರ್ಯದಲ್ಲಿ ಪ್ರವೃತ್ತನಾದಲ್ಲಿ.

ಇ) ಕಾನೂನು ಭಂಗ ಮಾಡಿ ಹಿಂಸಾಕೃತ್ಯದಲ್ಲಿ ತೊಡಗಿದವರಾಗಿದ್ದರೆ.

ಈ) ಭಾರತ ದೇಶದ ಸಾರ್ವಭೌಮತೆ ಹಾಗೂ ಸುಭದ್ರತೆಗೆ ಧಕ್ಕೆ ತರುವ ಕಾರ್ಯದಲ್ಲಿ ಪ್ರವೃತ್ತರಾಗಿದ್ದರೆ.

ಉ) ಭಾರತ ಸರ್ಕಾರದ ಅಥವಾ ಯಾವುದೇ ರಾಜ್ಯ ಸರ್ಕಾರದ ಸೇವೆಯಿಂದ ಉಚ್ಛಾಟನೆಗೊಂಡ ಪ್ರಸಂಗಗಳಲ್ಲಿ.

ಊ) ನ್ಯಾಯಬಾಹಿರ ಕೃತ್ಯಗಳಲ್ಲಿ ತೊಡಗಿ ಅಪರಾಧಕ್ಕೆ ಒಳಗಾದ ಪ್ರಸಂಗಗಳಲ್ಲಿ.

ಋ) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿಯು ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿಯಿರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯುಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೆ ನೇಮಕಾತಿಗೆ ಅರ್ಹರಾಗುವುದಿಲ್ಲ.

ಎ) ಅಭ್ಯರ್ಥಿಯು ಮತ್ತೊಬ್ಬ ವ್ಯಕ್ತಿಯಂತೆ ನಟಿಸಿ ವಂಚಿಸಿದ ಅಥವಾ ದಾಖಲೆಗಳನ್ನು ತಿದ್ದಿದ ಅಥವಾ ಸೃಷ್ಟಿಸಿದ ಅಥವಾ ಸರಿಯಿಲ್ಲದ ಅಥವಾ ಸುಳ್ಳು ಅಥವಾ ದೋಷಪೂರ್ಣ ವಿವರಗಳನ್ನು ನೀಡುವ ಅಥವಾ ನೇಮಕಾತಿಗಾಗಿ ನಡೆಸುವ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಅನುಚಿತ ರೀತಿಯಲ್ಲಿ ವರ್ತಿಸುವ ಅಥವಾ ವರ್ತಿಸಲು ಪ್ರಯತ್ನಿಸಿದ ಅಥವಾ ಅವನ / ಅವಳ ನೇಮಕಾತಿಗಾಗಿ ಸಂಬಂಧಿಸಿದಂತೆ ಯಾವುದೇ ಇತರ ಅಕ್ರಮ ಅನುಚಿತ ವಿಧಾನಗಳನ್ನು ಅನುಸರಿಸಿದ ಕಾರಣದಿಂದಾಗಿ ತಪ್ಪಿತಸ್ಥನೆಂದು ಕಂಡು ಬಂದಲ್ಲಿ ಅವನ / ಅವಳ ಅಭ್ಯರ್ಥಿ ತನವನ್ನು ಯಾವುದೇ ಸೂಚನೆ ನೀಡದೆ ರದ್ದುಗೊಳಿಸಲಾಗುವುದು ಮತ್ತು ಅಂತಹವರನ್ನು ಕ್ರಿಮಿನಲ್ ಪ್ರಾಸಿಕ್ಯೂಷನ್‌ಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡಿಸಲಾಗುವುದು.

ಏ) ಆಯ್ಕೆ ಪ್ರಾಧಿಕಾರಿಯು ನಡೆಸುವ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಮತ್ತು ಅರ್ಹತಾ ಪರೀಕ್ಷೆಗಳಲ್ಲಿ ಪಡೆದಿರುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಿದ ಆಯ್ಕೆಪಟ್ಟಿಯಲ್ಲಿ ಅವನ / ಅವಳ ಆಯ್ಕೆಯು ಖಾಯಂ ಆಗದ ಹೊರತು ನೇಮಕಾತಿಗಾಗಿ ಹಕ್ಕನ್ನು ಪಡೆದುಕೊಳ್ಳುವುದಿಲ್ಲ.

ಐ) ಈ ನೇಮಕಾತಿಯು, ಮತ್ತು ಈ ಅಧಿಸೂಚನೆಯಲ್ಲಿ ತಿಳಿಸಿರುವ ಆದೇಶಗಳು, ಜ್ಞಾಪನಗಳು, ಸುತ್ತೋಲೆಗಳು ಕಾಲದಿಂದ ಕಾಲಕ್ಕೆ ಹೊರಡಿಸಿರುವ ಆದೇಶಗಳು ಮತ್ತು ತಿದ್ದುಪಡಿಗೆ ಒಳಪಟ್ಟಿರುತ್ತದೆ.

ಒ) ಆಯ್ಕೆ ಮತ್ತು ನೇಮಕಾತಿ ಪ್ರಕ್ರಿಯೆಯ ಯಾವುದೇ ಹಂತದಲ್ಲಿ ಆಯ್ಕೆಗೆ ಪರಿಗಣಿಸಿರುವ ಅಂಶಗಳ ಬಗ್ಗೆ ವ್ಯತ್ಯಾಸ ಕಂಡು ಬಂದಲ್ಲಿ ಅಥವಾ ಆಕ್ಷೇಪಣೆ ಸಲ್ಲಿಕೆಯಾದಲ್ಲಿ, ಕೋರ್ಟಿನ ತೀರ್ಪುಗಳು, ಇಲಾಖೆ ಸುತ್ತೋಲೆಗಳು, ಸರ್ಕಾರದ ನಿರ್ದೇಶನಗಳು ಬಂದಲ್ಲಿ ಪ್ರಕಟಿಸಿರುವ ಪಟ್ಟಿಗಳಲ್ಲಿ ಸೂಕ್ತ ಬದಲಾವಣೆ ಮಾಡಿ ಆಯ್ಕೆ ಪಟ್ಟಿ ಪರಿಷ್ಕರಿಸುವ ಅಧಿಕಾರವನ್ನು ಆಯ್ಕೆ ಪ್ರಾಧಿಕಾರ ಹೊಂದಿರುತ್ತದೆ.

ಓ) **ನೇಮಕಾತಿ ಪ್ರಕ್ರಿಯೆ ಪೂರ್ಣಗೊಳ್ಳುವವರೆಗೆ ಈ ಸಂಬಂಧ ಆಯ್ಕೆ ಪ್ರಾಧಿಕಾರಿ/ನೇಮಕಾತಿ ಪ್ರಾಧಿಕಾರಿಗಳು ನೀಡುವ ಸೂಚನೆಗಳನ್ನು ಇಲಾಖೆಯ ಅಧಿಕೃತ ವೆಬ್‌ಸೈಟ್‌ನಲ್ಲಿ (www.schooleducation.kar.nic.in) ಅವಲೋಕಿಸುವುದು.**

**(ಡಿ.ಕೆ.ಶಿವಕುಮಾರ್)**

ಆಯ್ಕೆ ಪ್ರಾಧಿಕಾರಿ ಹಾಗೂ ಸಹನಿರ್ದೇಶಕರು,

ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ವಿಭಾಗ, ಬೆಂಗಳೂರು.

## *ಸಾರ್ವಜನಿಕ ಶಿಕ್ಷಣ ಇಲಾಖೆ*

**ಆಯ್ಕೆ ಪ್ರಾಧಿಕಾರಿಗಳು ಹಾಗೂ ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ವಿಭಾಗ, ಆಯುಕ್ತರ ಕಛೇರಿ, ಬೆಂಗಳೂರು–01.**

**ಸಂಖ್ಯೆ: ಅ1/ಪೌಶಾಶಿ/ನೇಮಕ 01/2014–15, ದಿನಾಂಕ: 23.05.2015**

**ಅನುಬಂಧ–1**

| ಕ್ರ.ಸಂ | ಜಿಲ್ಲೆಯ ಹೆಸರು | ಭಾಷೆಗಳು | | | | | | | ಕಲಾ | | | | ಪಿಸಿಎಂ | | | | ಸಿಬಿಜಡ್ | | | | ದೈಶಿ | |
|---|---|---|---|---|---|---|---|---|---|---|---|---|---|---|---|---|---|---|---|---|---|---|
| | | ಕನ್ನಡ | ಆಂಗ್ಲ | ಹಿಂದಿ | ಉರ್ದು | ತೆಲುಗು | ತಮಿಳು | ಸಂಸ್ಕೃತ | ಕನ್ನಡ | ಉರ್ದು | ಆಂಗ್ಲ | ತಮಿಳು | ಕನ್ನಡ | ಆಂಗ್ಲ | ಉರ್ದು | ಟಿಜಿಟಿ | ಕನ್ನಡ | ಉರ್ದು | ಆಂಗ್ಲ | ತಮಿಳು | ಗ್ರೇಡ್-1 | ಒಟ್ಟು |
| 1 | ಬೆಂ ಉತ್ತರ | | 02 | 01 | 01 | | 01 | | | | | | | | | | | | | | 01 | **6** |
| 2 | ಬೆಂ ದಕ್ಷಿಣ | 04 | 03 | 02 | | | 01 | | 07 | | | | 01 | | | | 03 | | | | 02 | **23** |
| 3 | ಬೆಂಗ್ರಾಮಾಂತರ | | 04 | 02 | | | | | 03 | | | | 02 | | | | 01 | | | | 05 | **17** |
| 4 | ರಾಮನಗರ | 06 | 09 | 03 | | | | | 03 | | 03 | | 02 | 04 | | | 03 | | | | 10 | **43** |
| 5 | ಕೋಲಾರ | 14 | 30 | 08 | 01 | | | 02 | 07 | | 04 | | 01 | 06 | | | 04 | | 03 | | 20 | **100** |
| 6 | ಚಿಕ್ಕಬಳ್ಳಾಪುರ | 14 | 12 | 06 | | | | | 09 | | 04 | | 08 | 08 | | | 10 | | | | 11 | **82** |
| 7 | ಮಧುಗಿರಿ | 06 | 06 | 03 | | | | 01 | 03 | | 02 | | 03 | 02 | | | 09 | | | | 12 | **47** |
| 8 | ತುಮಕೂರು | 13 | 21 | 02 | 02 | | | 02 | 12 | 01 | | | 05 | | | | 14 | | | | 20 | **92** |
| 9 | ಚಿತ್ರದುರ್ಗ | 08 | 05 | 02 | | | | | 03 | | 02 | | 03 | 05 | | | 07 | | | | 03 | **38** |
| 10 | ದಾವಣಗೆರೆ | 04 | 13 | 01 | 01 | | | | 06 | 02 | 01 | | 03 | 02 | 01 | | 02 | 02 | | | 03 | **41** |
| 11 | ಶಿವಮೊಗ್ಗ | 07 | 12 | 00 | 01 | | | | 03 | 01 | | | 08 | | 02 | | 09 | 01 | | | 01 | **45** |
| | **ಒಟ್ಟು** | **76** | **117** | **30** | **06** | | **02** | **05** | **56** | **04** | **16** | | **36** | **27** | **03** | | **62** | **03** | **03** | | **88** | **534** |

**(ಡಿ.ಕೆ.ಶಿವಕುಮಾರ್)**
ಆಯ್ಕೆ ಪ್ರಾಧೀಕಾರಿಗಳು ಹಾಗೂ ಸಹ ನಿರ್ದೇಶಕರು
ಬೆಂಗಳೂರು ವಿಭಾಗ, ಬೆಂಗಳೂರು

2014–15 ನೇ ಸಾಲಿನ ಬೆಂಗಳೂರು ವಿಭಾಗದಲ್ಲಿ ಖಾಲಿ ಇರುವ ಸಹ ಶಿಕ್ಷಕರ ಗ್ರೇಡ್–2 ಹಾಗೂ ದೈಹಿಕ ಶಿಕ್ಷಣ ಶಿಕ್ಷಕರ ಗ್ರೇಡ್–1 ನೇಮಕಾತಿಗೆ ಹುದ್ದೆಗಳ ವರ್ಗೀಕರಣ.

ಜಿಲ್ಲೆಯ ಹೆಸರು : ಬೆಂಗಳೂರು ಉತ್ತರ ಜಿಲ್ಲೆ

ವಿಷಯ : ಆಂಗ್ಲ ಭಾಷೆ

ಒಟ್ಟು ಹುದ್ದೆಗಳು : 02

1. ಹಿಂದಿನ ನೇಮಕಾತಿಯ ಅಂತಿಮ ಬಿಂದು : 07

2. ಈ ನೇಮಕಾತಿಯ ಆರಂಭಿಕ ಬಿಂದು : 08

3. ಈ ನೇಮಕಾತಿಯ ಅಂತಿಮ ಬಿಂದು : 09

| | ಪ.ಜಾತಿ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|
| ಇತರೆ | | | | | | | | | |
| ಗ್ರಾಮೀಣ | | | | | | | | | |
| ಕ.ಮಾ.ಅ | | | | | | | | | |
| ಯೋ.ಅ | | | | | | | | | |
| ಮಾ.ಸೈ | | | | | | | | | |
| ಅಂ.ವಿ | | | | | | | | | |
| ಮ.ಅ | 01 | | | | | | | 01 | 02 |
| **ಒಟ್ಟು** | **01** | | | | | | | **01** | **02** |

2014–15 ನೇ ಸಾಲಿನ ಬೆಂಗಳೂರು ವಿಭಾಗದಲ್ಲಿ ಖಾಲಿ ಇರುವ ಸಹ ಶಿಕ್ಷಕರ ಗ್ರೇಡ್–2 ಹಾಗೂ ದೈಹಿಕ ಶಿಕ್ಷಣ ಶಿಕ್ಷಕರ ಗ್ರೇಡ್–1 ನೇಮಕಾತಿಗೆ ಹುದ್ದೆಗಳ ವರ್ಗೀಕರಣ.

ಜಿಲ್ಲೆಯ ಹೆಸರು : ಬೆಂಗಳೂರು ಉತ್ತರ ಜಿಲ್ಲೆ

ವಿಷಯ : ಹಿಂದಿ ಭಾಷೆ

ಒಟ್ಟು ಹುದ್ದೆಗಳು : 01

1. ಹಿಂದಿನ ನೇಮಕಾತಿಯ ಅಂತಿಮ ಬಿಂದು : 10

2. ಈ ನೇಮಕಾತಿಯ ಆರಂಭಿಕ ಬಿಂದು : 11

3. ಈ ನೇಮಕಾತಿಯ ಅಂತಿಮ ಬಿಂದು : 11

| | ಪ.ಜಾತಿ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|
| ಇತರೆ | | | | | 01 | | | | 01 |
| ಗ್ರಾಮೀಣ | | | | | | | | | |
| ಕ.ಮಾ.ಅ | | | | | | | | | |
| ಯೋ.ಅ | | | | | | | | | |
| ಮಾ.ಸೈ | | | | | | | | | |
| ಅಂ.ವಿ | | | | | | | | | |
| ಮ.ಅ | | | | | | | | | |
| **ಒಟ್ಟು** | | | | | **01** | | | | **01** |

2014–15 ನೇ ಸಾಲಿನ ಬೆಂಗಳೂರು ವಿಭಾಗದಲ್ಲಿ ಖಾಲಿ ಇರುವ ಸಹ ಶಿಕ್ಷಕರ ಗ್ರೇಡ್–2 ಹಾಗೂ ದೈಹಿಕ ಶಿಕ್ಷಣ ಶಿಕ್ಷಕರ ಗ್ರೇಡ್–1 ನೇಮಕಾತಿಗೆ ಹುದ್ದೆಗಳ ವರ್ಗೀಕರಣ.

ಜಿಲ್ಲೆಯ ಹೆಸರು : ಬೆಂಗಳೂರು ಉತ್ತರ ಜಿಲ್ಲೆ

ವಿಷಯ : ತಮಿಳು ಭಾಷೆ

ಒಟ್ಟು ಹುದ್ದೆಗಳು : 01

1. ಹಿಂದಿನ ನೇಮಕಾತಿಯ ಅಂತಿಮ ಬಿಂದು : 00

2. ಈ ನೇಮಕಾತಿಯ ಆರಂಭಿಕ ಬಿಂದು : 01

3. ಈ ನೇಮಕಾತಿಯ ಅಂತಿಮ ಬಿಂದು : 01

| | ಪ.ಜಾತಿ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|
| ಇತರೆ | 01 | | | | | | | | 01 |
| ಗ್ರಾಮೀಣ | | | | | | | | | |
| ಕ.ಮಾ.ಅ | | | | | | | | | |
| ಯೋ.ಅ | | | | | | | | | |
| ಮಾ.ಸೈ | | | | | | | | | |
| ಅಂ.ವಿ | | | | | | | | | |
| ಮ.ಅ | | | | | | | | | |
| **ಒಟ್ಟು** | **01** | | | | | | | | **01** |

2014–15 ನೇ ಸಾಲಿನ ಬೆಂಗಳೂರು ವಿಭಾಗದಲ್ಲಿ ಖಾಲಿ ಇರುವ ಸಹ ಶಿಕ್ಷಕರ ಗ್ರೇಡ್–2 ಹಾಗೂ ದೈಹಿಕ ಶಿಕ್ಷಣ ಶಿಕ್ಷಕರ ಗ್ರೇಡ್–1 ನೇಮಕಾತಿಗೆ ಹುದ್ದೆಗಳ ವರ್ಗೀಕರಣ.

ಜಿಲ್ಲೆಯ ಹೆಸರು : ಬೆಂಗಳೂರು ಉತ್ತರ ಜಿಲ್ಲೆ

ವಿಷಯ : ಉರ್ದು ಭಾಷೆ

ಒಟ್ಟು ಹುದ್ದೆಗಳು : 01

1. ಹಿಂದಿನ ನೇಮಕಾತಿಯ ಅಂತಿಮ ಬಿಂದು : 00

2. ಈ ನೇಮಕಾತಿಯ ಆರಂಭಿಕ ಬಿಂದು : 01

3. ಈ ನೇಮಕಾತಿಯ ಅಂತಿಮ ಬಿಂದು : 01

| | ಪ.ಜಾತಿ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|
| ಇತರೆ | 01 | | | | | | | | **01** |
| ಗ್ರಾಮೀಣ | | | | | | | | | |
| ಕ.ಮಾ.ಅ | | | | | | | | | |
| ಯೋ.ಅ | | | | | | | | | |
| ಮಾ.ಸೈ | | | | | | | | | |
| ಅಂ.ವಿ | | | | | | | | | |
| ಮ.ಅ | | | | | | | | | |
| **ಒಟ್ಟು** | **01** | | | | | | | | **01** |

2014–15 ನೇ ಸಾಲಿನ ಬೆಂಗಳೂರು ವಿಭಾಗದಲ್ಲಿ ಖಾಲಿ ಇರುವ ಸಹ ಶಿಕ್ಷಕರ ಗ್ರೇಡ್–2 ಹಾಗೂ ದೈಹಿಕ ಶಿಕ್ಷಣ ಶಿಕ್ಷಕಂ ಗ್ರೇಡ್–1 ನೇಮಕಾತಿಗೆ ಹುದ್ದೆಗಳ ವರ್ಗೀಕರಣ.

ಜಿಲ್ಲೆಯ ಹೆಸರು : ಬೆಂಗಳೂರು ಉತ್ತರ ಜಿಲ್ಲೆ
ವಿಷಯ : ದೈಹಿಕ ಶಿಕ್ಷಣ ಗ್ರೇ–1
ಒಟ್ಟು ಹುದ್ದೆಗಳು : 01

1. ಹಿಂದಿನ ನೇಮಕಾತಿಯ ಅಂತಿಮ ಬಿಂದು : 10
2. ಈ ನೇಮಕಾತಿಯ ಆರಂಭಿಕ ಬಿಂದು : 11
3. ಈ ನೇಮಕಾತಿಯ ಅಂತಿಮ ಬಿಂದು : 11

| | ಪ.ಜಾತಿ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|
| ಇತರೆ | | | | | 01 | | | | **01** |
| ಗ್ರಾಮೀಣ | | | | | | | | | |
| ಕ.ಮಾ.ಅ | | | | | | | | | |
| ಯೋ.ಅ | | | | | | | | | |
| ಮಾ.ಸೈ | | | | | | | | | |
| ಅಂ.ವಿ | | | | | | | | | |
| ಮ.ಅ | | | | | | | | | |
| **ಒಟ್ಟು** | | | | | **01** | | | | **01** |

2014–15 ನೇ ಸಾಲಿನ ಬೆಂಗಳೂರು ವಿಭಾಗದಲ್ಲಿ ಖಾಲಿ ಇರುವ ಸಹ ಶಿಕ್ಷಕರ ಗ್ರೇಡ್–2 ಹಾಗೂ ದೈಹಿಕ ಶಿಕ್ಷಣ ಶಿಕ್ಷಕರ ಗ್ರೇಡ್–1 ನೇಮಕಾತಿಗೆ ಹುದ್ದೆಗಳ ವರ್ಗೀಕರಣ.

ಜಿಲ್ಲೆಯ ಹೆಸರು : ಬೆಂಗಳೂರು ದಕ್ಷಿಣ ಜಿಲ್ಲೆ
ವಿಷಯ : ಕನ್ನಡ ಭಾಷೆ
ಒಟ್ಟು ಹುದ್ದೆಗಳು : 04

1. ಹಿಂದಿನ ನೇಮಕಾತಿಯ ಅಂತಿಮ ಬಿಂದು : 22
2. ಈ ನೇಮಕಾತಿಯ ಆರಂಭಿಕ ಬಿಂದು : 23
3. ಈ ನೇಮಕಾತಿಯ ಅಂತಿಮ ಬಿಂದು : 26

| | ಪ.ಜಾತಿ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|
| ಇತರೆ | | | | | | | | | |
| ಗ್ರಾಮೀಣ | 01 | | | | | | | 01 | **02** |
| ಕ.ಮಾ.ಅ | | | | | | | | | |
| ಯೋ.ಅ | | | | | | | | | |
| ಮಾ.ಸೈ | | | | | | | | | |
| ಅಂ.ವಿ | | | | | | | | 01* | **01** |
| ಮ.ಅ | | | | 01 | | | | | **01** |
| **ಒಟ್ಟು** | **01** | | | **01** | | | | **02** | **04** |

***ಅಂಗವಿಕಲ–ದೃಷ್ಟಿ ಮಾಂದ್ಯತೆಯುಳ್ಳವರಿಗೆ.**

2014–15 ನೇ ಸಾಲಿನ ಬೆಂಗಳೂರು ವಿಭಾಗದಲ್ಲಿ ಖಾಲಿ ಇರುವ ಸಹ ಶಿಕ್ಷಕರ ಗ್ರೇಡ್–2 ಹಾಗೂ ದೈಹಿಕ ಶಿಕ್ಷಣ ಶಿಕ್ಷಕರ ಗ್ರೇಡ್–1 ನೇಮಕಾತಿಗೆ ಹುದ್ದೆಗಳ ವರ್ಗೀಕರಣ.

ಜಿಲ್ಲೆಯ ಹೆಸರು : ಬೆಂಗಳೂರು ದಕ್ಷಿಣ ಜಿಲ್ಲೆ
ವಿಷಯ : ಆಂಗ್ಲ ಭಾಷೆ
ಒಟ್ಟು ಹುದ್ದೆಗಳು : 03

1. ಹಿಂದಿನ ನೇಮಕಾತಿಯ ಅಂತಿಮ ಬಿಂದು : 25
2. ಈ ನೇಮಕಾತಿಯ ಆರಂಭಿಕ ಬಿಂದು : 26
3. ಈ ನೇಮಕಾತಿಯ ಅಂತಿಮ ಬಿಂದು : 28

| | ಪ.ಜಾತಿ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|
| ಇತರೆ | 01 | | | | | | | | 01 |
| ಗ್ರಾಮೀಣ | | | | | | | | 01 | 01 |
| ಕ.ಮಾ.ಅ | | | | | | | | | |
| ಯೋ.ಅ | | | | | | | | | |
| ಮಾ.ಸೈ | | | | | | | | | |
| ಅಂ.ವಿ | | | | | | | | | |
| ಮ.ಅ | | | | | | | | 01 | 01 |
| ಒಟ್ಟು | 01 | | | | | | | 02 | 03 |

2014–15 ನೇ ಸಾಲಿನ ಬೆಂಗಳೂರು ವಿಭಾಗದಲ್ಲಿ ಖಾಲಿ ಇರುವ ಸಹ ಶಿಕ್ಷಕರ ಗ್ರೇಡ್–2 ಹಾಗೂ ದೈಹಿಕ ಶಿಕ್ಷಣ ಶಿಕ್ಷಕರ ಗ್ರೇಡ್–1 ನೇಮಕಾತಿಗೆ ಹುದ್ದೆಗಳ ವರ್ಗೀಕರಣ.

ಜಿಲ್ಲೆಯ ಹೆಸರು : ಬೆಂಗಳೂರು ದಕ್ಷಿಣ ಜಿಲ್ಲೆ
ವಿಷಯ : ಹಿಂದಿ ಭಾಷೆ
ಒಟ್ಟು ಹುದ್ದೆಗಳು : 02

1. ಹಿಂದಿನ ನೇಮಕಾತಿಯ ಅಂತಿಮ ಬಿಂದು : 15
2. ಈ ನೇಮಕಾತಿಯ ಆರಂಭಿಕ ಬಿಂದು : 16
3. ಈ ನೇಮಕಾತಿಯ ಅಂತಿಮ ಬಿಂದು : 17

| | ಪ.ಜಾತಿ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|
| ಇತರೆ | | | | | | | | | |
| ಗ್ರಾಮೀಣ | | | | | | | | 01 | 01 |
| ಕ.ಮಾ.ಅ | | | | | | | | | |
| ಯೋ.ಅ | | | | | | 01 | | | 01 |
| ಮಾ.ಸೈ | | | | | | | | | |
| ಅಂ.ವಿ | | | | | | | | | |
| ಮ.ಅ | | | | | | | | | |
| **ಒಟ್ಟು** | | | | | | 01 | | 01 | 02 |

**2014–15 ನೇ ಸಾಲಿನ ಬೆಂಗಳೂರು ವಿಭಾಗದಲ್ಲಿ ಖಾಲಿ ಇರುವ ಸಹ ಶಿಕ್ಷಕರ ಗ್ರೇಡ್–2 ಹಾಗೂ ದೈಹಿಕ ಶಿಕ್ಷಣ ಶಿಕ್ಷಕರ ಗ್ರೇಡ್–1 ನೇಮಕಾತಿಗೆ ಹುದ್ದೆಗಳ ವರ್ಗೀಕರಣ.**

**ಜಿಲ್ಲೆಯ ಹೆಸರು : ಬೆಂಗಳೂರು ದಕ್ಷಿಣ ಜಿಲ್ಲೆ** — **1. ಹಿಂದಿನ ನೇಮಕಾತಿಯ ಅಂತಿಮ ಬಿಂದು : 00**

**ವಿಷಯ : ತಮಿಳು ಭಾಷೆ** — **2. ಈ ನೇಮಕಾತಿಯ ಆರಂಭಿಕ ಬಿಂದು : 01**

**ಒಟ್ಟು ಹುದ್ದೆಗಳು : 01** — **3. ಈ ನೇಮಕಾತಿಯ ಅಂತಿಮ ಬಿಂದು : 01**

| | ಪ.ಜಾತಿ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|
| ಇತರೆ | 01 | | | | | | | | **01** |
| ಗ್ರಾಮೀಣ | | | | | | | | | |
| ಕ.ಮಾ.ಅ | | | | | | | | | |
| ಯೋ.ಅ | | | | | | | | | |
| ಮಾ.ಸೈ | | | | | | | | | |
| ಅಂ.ವಿ | | | | | | | | | |
| ಮ.ಅ | | | | | | | | | |
| **ಒಟ್ಟು** | **01** | | | | | | | | **01** |

**2014–15 ನೇ ಸಾಲಿನ ಬೆಂಗಳೂರು ವಿಭಾಗದಲ್ಲಿ ಖಾಲಿ ಇರುವ ಸಹ ಶಿಕ್ಷಕರ ಗ್ರೇಡ್–2 ಹಾಗೂ ದೈಹಿಕ ಶಿಕ್ಷಣ ಶಿಕ್ಷಕರ ಗ್ರೇಡ್–1 ನೇಮಕಾತಿಗೆ ಹುದ್ದೆಗಳ ವರ್ಗೀಕರಣ.**

**ಜಿಲ್ಲೆಯ ಹೆಸರು : ಬೆಂಗಳೂರು ದಕ್ಷಿಣ ಜಿಲ್ಲೆ** — **1. ಹಿಂದಿನ ನೇಮಕಾತಿಯ ಅಂತಿಮ ಬಿಂದು : 58**

**ವಿಷಯ : ಕಲಾ ಕನ್ನಡ** — **2. ಈ ನೇಮಕಾತಿಯ ಆರಂಭಿಕ ಬಿಂದು : 59**

**ಒಟ್ಟು ಹುದ್ದೆಗಳು : 07** — **3. ಈ ನೇಮಕಾತಿಯ ಅಂತಿಮ ಬಿಂದು : 65**

| | ಪ.ಜಾತಿ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|
| ಇತರೆ | 01 | | | | 01 | | | | **02** |
| ಗ್ರಾಮೀಣ | | | | 01 | | | | | **01** |
| ಕ.ಮಾ.ಅ | | | | | | | | | |
| ಯೋ.ಅ | | | | | | | | | |
| ಮಾ.ಸೈ | | | | | | | | 01 | **01** |
| ಅಂ.ವಿ | | | | | | | | 01 * | **01** |
| ಮ.ಅ | | | | | | | 01 | 01 | **02** |
| ಒಟ್ಟು | **01** | | | **01** | **01** | | **01** | **03** | **07** |

***ಅಂಗವಿಕಲ–ದೃಷ್ಟಿ ಮಾಂದ್ಯತೆಯುಳ್ಳವರಿಗೆ.**

**ಬ್ಯಾಚುಲರ್ ಪದವಿಯಲ್ಲಿ ಸಂಬಂಧಿಸಿದ ಭಾಷಾ ಶಿಕ್ಷಕರ ಹುದ್ದೆಗೆ ಅನುಗುಣವಾದ ಭಾಷಾ ಐಚ್ಛಿಕ ವಿಷಯವನ್ನು ಅಧ್ಯಯನ ಮಾಡದೆ ಇದ್ದಲ್ಲಿ ಅಂಥಹ ಅಭ್ಯರ್ಥಿಗಳು;**

**a)** ಸಂಬಂದಿಸಿದ ಭಾಷಾ ವಿಷಯದಲ್ಲಿ ಸ್ನಾತಕೋತ್ತರ ಪದವಿಯನ್ನು (**Post Graduate Degree**) ಹೊಂದಿದ್ದಲ್ಲಿ ಸಂಬಂಧಿಸಿದ ಭಾಷಾ ಶಿಕ್ಷಕರ ಹುದ್ದೆಗೆ ಪರಿಗಣಿಸಲು ಅರ್ಹತೆ ಪಡೆಯುತ್ತಾರೆ.

**b)** **ರೀಜನಲ್ ಇನ್ಸ್ಟ್ಯೂಟ್ ಆಫ್ ಇಂಗ್ಲೀಷ್ ಸೌತ್ ಇಂಡಿಯಾ** ಇವರು ನೀಡುವ **ಪೋಸ್ಟ್ ಗ್ರಾಜುಯೇಟ್ ಡಿಪ್ಲೋಮಾ ಸರ್ಟಿಫಿಕೇಟ್ ಇನ್ ಇಂಗ್ಲೀಷ್** ಹೊಂದಿದ್ದಲ್ಲಿ ಅಂತಹ ಅಭ್ಯರ್ಥಿಗಳು ಇಂಗ್ಲೀಷ್ ಭಾಷಾ ಶಿಕ್ಷಕರ ಹುದ್ದೆಗೆ ಪರಿಗಣಿಸಲು ಅರ್ಹತೆ ಪಡೆಯುತ್ತಾರೆ.

**c)** ಹಿಂದಿ ಭಾಷಾ ಶಿಕ್ಷಕರ ಹುದ್ದೆಗೆ ಅಭ್ಯರ್ಥಿಯು, ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾನಿಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾನಿಲಯದ **ಬ್ಯಾಚುಲರ್ ಪದವೀಧರರಾಗಿದ್ದು,** ಈ ಪದವಿಯಲ್ಲಿ **ಹಿಂದಿ**ಯನ್ನು ಒಂದು ಐಚ್ಛಿಕ ವಿಷಯವನ್ನಾಗಿ ಅಧ್ಯಯನ ಮಾಡಿರಬೇಕು.

**ಮತ್ತು**

ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾನಿಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾನಿಲಯದಿಂದ **ಬ್ಯಾಚುಲರ್ ಆಫ್ ಎಜುಕೇಷನ್ (ಬಿ.ಇಡಿ.,)** ಪದವೀಧರರಾಗಿದ್ದು, ಈ ಪದವಿ ಪರೀಕ್ಷೆಯಲ್ಲಿ **ಹಿಂದಿ**ಯನ್ನು ಬೋಧನಾ ವಿಷಯವನ್ನಾಗಿ ಅಧ್ಯಯನ ಮಾಡಿರಬೇಕು.

**d)** ಇಂಗ್ಲೀಷ್ ಭಾಷಾ ಶಿಕ್ಷಕರ ಹುದ್ದೆಗೆ ಸಂಬಂಧಿಸಿದಂತೆ ಅಭ್ಯರ್ಥಿಗಳು ಬಿ.ಎಡ್. ಪದವಿಯಲ್ಲಿ ಇಂಗ್ಲೀಷ್‌ನ್ನು ಬೋಧನಾ ವಿಷಯವನ್ನಾಗಿ ಅಧ್ಯಯನ ಮಾಡದೆ ಇದ್ದಲ್ಲಿ ಅಂತಹ ಅಭ್ಯರ್ಥಿಗಳು **ರೀಜನಲ್ ಇನ್ಸ್ಟ್ಯೂಟ್ ಆಫ್ ಇಂಗ್ಲೀಷ್, ಸೌತ್ ಇಂಡಿಯಾ** ಇವರು ನೀಡುವ **ಪೋಸ್ಟ್ ಗ್ರಾಜುಯೇಟ್ ಡಿಪ್ಲೋಮಾ ಸರ್ಟಿಫಿಕೇಟ್ ಇನ್ ಇಂಗ್ಲೀಷ್** ಹೊಂದಿದ್ದಲ್ಲಿ ನೇಮಕಾತಿಗೆ ಪರಿಗಣಿಸಲು ಅರ್ಹತೆ ಪಡೆಯುತ್ತಾರೆ.

**ವಿಶೇಷ ಸೂಚನೆ:–** **ಮೇಲ್ಕಂಡ ಎ, ಬಿ ಮತ್ತು ಡಿ ಪ್ರಕರಣಗಳಲ್ಲಿ ಅಭ್ಯರ್ಥಿಯು ಬ್ಯಾಚುಲರ್ ಪದವಿ ಮತ್ತು ಬ್ಯಾಚುಲರ್ ಆಫ್ ಎಜುಕೇಷನ್ ಪದವಿ ಪರೀಕ್ಷೆಗಳಲ್ಲಿ ಪಡೆದಿರುವ ಅಂಕಗಳನ್ನು ಮಾತ್ರ ಮೆರಿಟ್ ಕಂಡುಕೊಳ್ಳಲು ಪರಿಗಣಿಸಲಾಗುತ್ತದೆ. ಆದರೆ ಸ್ನಾತಕೋತ್ತರ ಮತ್ತು ಡಿಪ್ಲೋಮಾ ಪರೀಕ್ಷೆಗಳಲ್ಲಿ ಪಡೆದಿರುವ ಅಂಕಗಳನ್ನು ಮೆರಿಟ್ ಕಂಡು ಹಿಡಿಯಲು ಗಣನೆಗೆ ತೆಗೆದುಕೊಳ್ಳುವುದಿಲ್ಲ.**

**ಹಿಂದಿ ಭಾಷಾ ಶಿಕ್ಷಕರ ಹುದ್ದೆಗೆ ಸಂಬಂಧಿಸಿದಂತೆ ಅಭ್ಯರ್ಥಿಯು:–**

1. ದಕ್ಷಿಣ ಭಾರತ ಹಿಂದಿ ಪ್ರಚಾರ ಸಭಾ, ಮದ್ರಾಸ್ ಇವರು ನಡೆಸುವ **ರಾಷ್ಟ್ರಭಾಷಾ ಪ್ರವೀಣ್ ಮತ್ತು ಶಿಕ್ಷಾ ಸ್ನಾತಕ್** (ಹಿಂದಿ ಮತ್ತು ಮತ್ತೊಂದು ಭಾಷೆಯನ್ನು ಬೋಧನಾ ವಿಷಯವನ್ನಾಗಿ **ಶಿಕ್ಷಾ ಸ್ನಾತಕ್** ಪರೀಕ್ಷೆಯಲ್ಲಿ ಅಧ್ಯಯನ ಮಾಡಿರಬೇಕು) ಮತ್ತು **ಪದವಿ ಪೂರ್ವ ಶಿಕ್ಷಣ (ಪಿ.ಯು.ಸಿ) ಕೋರ್ಸಿನಲ್ಲಿ ಉತ್ತೀರ್ಣರಾಗಿದ್ದು,** ಸದರಿ ಕೋರ್ಸಿನಲ್ಲಿ ಕನ್ನಡ ಅಥವಾ ಯಾವುದೇ ಒಂದು ಪ್ರಾದೇಶಿಕ ಭಾಷೆಯನ್ನು ಒಂದು ವಿಷಯವನ್ನಾಗಿ ಅಥವಾ ಮಾಧ್ಯಮವನ್ನಾಗಿ ವ್ಯಾಸಂಗ ಮಾಡಿರಬೇಕು.

**ಅಥವಾ**

2. ರಾಜ್ಯ ಸರ್ಕಾರವು ತತ್ಸಮಾನ ವಿದ್ಯಾರ್ಹತೆ ಎಂದು ಘೋಷಿಸಿರುವ ಇತರೆ ಯಾವುದೇ ವಿದ್ಯಾರ್ಹತೆಯನ್ನು ಹೊಂದಿದ್ದಲ್ಲಿ ನೇಮಕಾತಿಗೆ ಪರಿಗಣಿಸಲು ಅರ್ಹತೆ ಪಡೆಯುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ ಇಡಿ 160 ಪಿಟಿಐ 2003 ದಿನಾಂಕ 24–02–2004 ಹಾಗೂ ಇಡಿ 272 ಪಿಟಿಐ 2013 ದಿನಾಂಕ: 23.11.2013 ರನ್ವಯ ಈಕೆಳಕಂಡಂತೆ ಪದವಿ ಮತ್ತು ಬಿ.ಇಡಿ., ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿರಬೇಕು.**

| **ಅ) ಪದವಿ ತತ್ಸಮಾನ ಪರೀಕ್ಷೆ ಹೆಸರು** | **ಸಂಸ್ಥೆಯ ಹೆಸರು** |
|---|---|
| **1. ಹಿಂದಿ ರತ್ನ** | **ಮೈಸೂರು ಹಿಂದಿ ಪ್ರಚಾರ ಪರಿಷತ್,ಬೆಂಗಳೂರು** |
| **2. ರಾಜ ಭಾಷಾ ವಿದ್ವಾನ್** | **ಕರ್ನಾಟಕ ಹಿಂದಿ ಪ್ರಚಾರ ಸಮಿತಿ,ಬೆಂಗಳೂರು** |
| **3 ಹಿಂದಿ ಭಾಷಾ ಪ್ರವೀಣ್** | **ಕರ್ನಾಟಕ ಮಹಿಳಾ ಹಿಂದಿ ಸೇವಾ ಸಮಿತಿ,ಬೆಂಗಳೂರು** |
| **4 ರಾಷ್ಟ್ರಭಾಷಾ ಪ್ರವೀಣ್** | **ದಕ್ಷಿಣ ಭಾರತ ಹಿಂದಿ ಪ್ರಚಾರ ಸಭಾ,ಮದ್ರಾಸ್** |

**ಸರ್ಕಾರದ ಆದೇಶ ಸಂಖ್ಯೆ ಇಡಿ 125 ಪಿಟಿಐ 2003 ದಿನಾಂಕ 16–08–2003 ರನ್ವಯ ಕೆಳಕಂಡ ವಿದ್ಯಾರ್ಹತೆಗಳನ್ನು ಬಿಎಡ್ ಪರೀಕ್ಷೆಗೆ ತತ್ಸಮಾನವೆಂದು ಈ ಕೆಳಕಂಡ ಷರತ್ತಿಗೆ ಒಳಪಟ್ಟು ಘೋಷಿಸಲಾಗಿದೆ.**

| **ಆ) ಬಿಎಡ್ ತತ್ಸಮಾನ ಪರೀಕ್ಷೆ ಹೆಸರು** | **ಸಂಸ್ಥೆಯ ಹೆಸರು** |
|---|---|
| **1. ಹಿಂದಿ ಶಿಕ್ಷಕ್** | **ಅ. ಕರ್ನಾಟಕ ಮಹಿಳಾ ಹಿಂದಿ ಸೇವಾ ಸಮಿತಿ,ಬೆಂಗಳೂರು** |
| | **ಆ. ಕರ್ನಾಟಕ ಹಿಂದಿ ಪ್ರಚಾರ ಸಮಿತಿ, ಬೆಂಗಳೂರು** |
| | **ಇ. ಮೈಸೂರು ಹಿಂದಿ ಪ್ರಚಾರ ಪರಿಷತ್, ಬೆಂಗಳೂರು** |
| | **ಈ. ಮಾನಸ ಎಜುಕೇಷನ್ ಸೊಸೈಟಿ, ತುಮಕೂರು** |
| | **ಉ. ಕರ್ನಾಟಕ ಲೇಬರ್ ಎಜುಕೇಷನ್ ಸೊಸೈಟಿ, ಬೀದರ್** |
| | **ಊ. ಕರ್ನಾಟಕ ಪ್ರದೇಶ ಸಾಹಿತ್ಯ ಸಮ್ಮೇಳನ, ಗುಲ್ಬರ್ಗಾ.** |

2. **ಹಿಂದಿ ಶಿಕ್ಷಣ ಪಾರಂಗತ್ ಕೇಂದ್ರೀಯ ಹಿಂದಿ ಸಂಸ್ಥಾನ್, ಆಗ್ರಾ [ಸರ್ಕಾರಿ ಹಿಂದಿ ಶಿಕ್ಷಕರ ತರಬೇತಿ ಕಾಲೇಜು, ಮೈಸೂರು.]**

**ಷರತ್ತುಗಳು :–**

I) **ಹಿಂದಿ ಶಿಕ್ಷಕ್ ಮತ್ತು ಹಿಂದಿ ಶಿಕ್ಷಣ ಪಾರಂಗತ್ ವಿದ್ಯಾರ್ಹತೆ ಹೊಂದಿರುವ ಅಭ್ಯರ್ಥಿಗಳು ಸದರಿ ಕೋರ್ಸನ್ನು ಸೇರುವ ಮುಂಚೆ ಪಿ.ಯು.ಸಿ.ಯಲ್ಲಿ ಉತ್ತೀರ್ಣರಾಗಿದ್ದು, ಸದರಿ ಪಿ.ಯು ಕೋರ್ಸಿನಲ್ಲಿ ಕನ್ನಡ ಅಥವಾ ಯಾವುದಾದರೂ ಒಂದು ಪ್ರಾದೇಶಿಕ ಭಾಷೆಯನ್ನು ಒಂದು ವಿಷಯವನ್ನಾಗಿ ಅಥವಾ ಮಾಧ್ಯಮವನ್ನಾಗಿ ವ್ಯಾಸಂಗ ಮಾಡಿರಬೇಕು.**

II) **ಹಿಂದಿ ಜೊತೆಗೆ ಮತ್ತೊಂದು ಭಾಷೆಯನ್ನು ಬೋಧನಾ ವಿಧಾನವನ್ನಾಗಿ ಅಧ್ಯಯನ ಮಾಡಿರಬೇಕು.**

(ಉ) **<u>ದೈಹಿಕ ಶಿಕ್ಷಣ ಶಿಕ್ಷಕ ಗ್ರೇಡ್–1 ಹುದ್ದೆಗಳಿಗೆ (Physical Education Teacher Grade-I)</u>:–**

i) ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾನಿಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾನಿಲಯದ "**ಬ್ಯಾಚಲರ್ ಪದವಿ**" ಯನ್ನು ಪಡೆದಿರಬೇಕು.

**ಮತ್ತು**

ii) ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾನಿಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾನಿಲಯದ "**ಬ್ಯಾಚಲರ್ ಆಫ್ ಫಿಸಿಕಲ್ ಎಜುಕೇಷನ್**" ಪದವಿಯನ್ನು ಪಡೆದಿರಬೇಕು. ಅಥವಾ **ಗೌರ್ನಮೆಂಟ್ ಕಾಲೇಜ್ ಆಫ್ ಫಿಸಿಕಲ್ ಎಜುಕೇಷನ್** ಇಲ್ಲಿಂದ **ಡಿಪ್ಲೋಮಾ ಇನ್ ಫಿಸಿಕಲ್ ಎಜುಕೇಷನ್** ಹೊಂದಿರಬೇಕು. ಅಥವಾ ರಾಜ್ಯ ಸರಕಾರವು ತತ್ಸಮಾನ ಪರೀಕ್ಷೆ ಎಂದು ಪರಿಗಣಿಸಿರುವ ವಿದ್ಯಾರ್ಹತೆಯನ್ನು ಹೊಂದಿರಬೇಕು.

**ಸೂಚನೆ : ಸರ್ಕಾರಿ ಪ್ರೌಢಶಾಲಾ ಶಿಕ್ಷಕರ ನೇಮಕಾತಿ ನಡೆಸಲಾಗುವ ಸ್ಪರ್ಧಾತ್ಮಕ ಪರೀಕ್ಷೆಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಕಡ್ಡಾಯವಾಗಿ ಸಾಮಾನ್ಯ ಕಂಪ್ಯೂಟರ್ ಜ್ಞಾನವನ್ನು (Fundamentals, MSWindows, MS Word, MS Excell, MS Power Point) ಹೊಂದಿರತಕ್ಕದ್ದು.**

10. **<u>ವೇತನ ಶ್ರೇಣಿ</u>:–** ಪ್ರೌಢ ಶಾಲಾ ಸಹಾಯಕ ಶಿಕ್ಷಕರು ಗ್ರೇಡ್–2 ಹಾಗೂ ದೈಹಿಕ ಶಿಕ್ಷಣ ಶಿಕ್ಷಕ ಗ್ರೇಡ್–1 ವೃಂದದ ಹುದ್ದೆಗಳಿಗೆ: **₹17650 –450–19000–500–21000–600–24600–700–28800–800–32000.**

11. **<u>ವಯೋಮಿತಿ</u>**

ಅಭ್ಯರ್ಥಿಗಳು ಈ **ನೇಮಕಾತಿ ಅಧಿಸೂಚನೆ** ದಿನಾಂಕದಂದು ಮುಂದೆ ತಿಳಿಸಿರುವ ಕನಿಷ್ಠ ಮತ್ತು ಗರಿಷ್ಠ ವಯೋಮಿತಿಯೊಳಗಿರಬೇಕು.

**<u>ಕನಿಷ್ಠ</u>: 20 ವರ್ಷಗಳು ತುಂಬಿರಬೇಕು.**

**<u>ಗರಿಷ್ಠ</u>:**

| | |
|---|---|
| **ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡ ಅಥವಾ ಹಿಂದುಳಿದ ಪ್ರವರ್ಗ–1ಕ್ಕೆ ಸೇರಿದ ಅಭ್ಯರ್ಥಿಗಳು** | **45 ವರ್ಷಗಳನ್ನು ಮೀರಿರಬಾರದು.** |
| **ಪ್ರವರ್ಗ 2(ಎ), 2(ಬಿ), 3(ಎ) ಮತ್ತು 3(ಬಿ) ಗಳಿಗೆ ಸೇರಿದ ಅಭ್ಯರ್ಥಿಗಳು** | **43 ವರ್ಷಗಳನ್ನು ಮೀರಿರಬಾರದು** |
| **ಇತರೆ ಅಭ್ಯರ್ಥಿಗಳು [ಸಾಮಾನ್ಯ ಅಭ್ಯರ್ಥಿಗಳು]** | **40 ವರ್ಷಗಳನ್ನು ಮೀರಿರಬಾರದು** |

ಸರ್ಕಾರಿ ಪ್ರೌಢಶಾಲೆಗಳಲ್ಲಿ ಕಾರ್ಯನಿರ್ವಹಿಸಿದ /ನಿರ್ವಹಿಸುತ್ತಿರುವ "**ಅರೆಕಾಲಿಕ**" ಮತ್ತು ಗೌರವ ಶಿಕ್ಷಕರುಗಳಿಗೆ ಗರಿಷ್ಠ ವಯೋಮಿತಿಯನ್ನು ಅವರುಗಳು "**ಅರೆಕಾಲಿಕ/ಗೌರವ ಶಿಕ್ಷಕರ** ಸೇವೆ ಸಲ್ಲಿಸಿದ ವರ್ಷಗಳಷ್ಟು (ಗರಿಷ್ಠ 10 ವರ್ಷಗಳ ಮಿತಿಗೆ ಒಳಪಟ್ಟು) ಸಡಿಲಿಕೆ ಇರುತ್ತದೆ.

ಮಾಜಿ ಸೈನಿಕರಿಗೆ ಅವರು ಸೇವೆ ಸಲ್ಲಿಸದ ವರ್ಷಗಳಷ್ಟು ಅವಧಿ +3ವರ್ಷಗಳ ವಯೋಮಿತಿ ಸಡಿಲಿಕೆ ಇರುತ್ತದೆ.

12. **<u>ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ</u>:–ಆಯ್ಕೆ ಬಯಸುವ ಪ್ರತಿ ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಪ್ರಥಮ ಹಾಗೂ ದ್ವಿತೀಯ ಪತ್ರಿಕೆಯ ಪರೀಕ್ಷೆಗಳಿಗೆ ಕಡ್ಡಾಯವಾಗಿ ಹಾಜರಾಗಬೇಕು.**

13. **<u>ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಬಗ್ಗೆ ವಿವರಗಳು</u>:–**

i) **ಪರೀಕ್ಷೆ ಹೆಸರು:** ಪ್ರೌಢಶಾಲಾ ಸಹಾಯಕ ಶಿಕ್ಷಕ ಗ್ರೇಡ್–2 ವೃಂದದ ಮತ್ತು ದೈಹಿಕ ಶಿಕ್ಷಣ ಶಿಕ್ಷಕ ಗ್ರೇಡ್–1 ವೃಂದದ ಶಿಕ್ಷಕರ ಹುದ್ದೆಗಳಿಗೆ ನೇರ ನೇಮಕಾತಿಗಾಗಿ ನಡೆಸುವ ವಿಭಾಗೀಯ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ.

ii) **ಪರೀಕ್ಷೆ ನಡೆಸುವ ಪ್ರಾಧಿಕಾರಿ:** ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯನ್ನು ಮೈಸೂರು ವಿಭಾಗೀಯ ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು ವಿಭಾಗ, ಮೈಸೂರು ಇವರು ವಿಭಾಗ ಮಟ್ಟದಲ್ಲಿ ನಡೆಸುವರು. ಮೈಸೂರು ವಿಭಾಗದ ವ್ಯಾಪ್ತಿಯಲ್ಲಿ ಬರುವ ಶೈಕ್ಷಣಿಕ ಜಿಲ್ಲೆಗಳು **<u>(ಮೈಸೂರು, ಚಾಮರಾಜನಗರ, ಮಂಡ್ಯ, ಹಾಸನ, ಚಿಕ್ಕಮಗಳೂರು, ಕೊಡಗು, ದಕ್ಷಿಣ ಕನ್ನಡ ಮತ್ತು ಉಡುಪಿ)</u>** ಪರೀಕ್ಷಾ ಕೇಂದ್ರಗಳಾಗಿರುತ್ತವೆ.

iii) **ಪರೀಕ್ಷೆಯ ದಿನಾಂಕ: 13.06.2015 ರಿಂದ 15.06.2015. ರವರೆಗೆ**

iv) **ಪರೀಕ್ಷೆಯ ಅವಧಿ ಮತ್ತು ಸಮಯ :**

| **ಪರೀಕ್ಷಾ ವಿಷಯ** | **ದಿನಾಂಕ** | **ಸಮಯ** |
|---|---|---|
| ಸಾಮಾನ್ಯ ಪತ್ರಿಕೆ –1 | 13.06.2015 | ಬೆಳಗ್ಗೆ 09 ರಿಂದ 11 ಗಂಟೆವರೆಗೆ |
| ಕಲಾ ಶಿಕ್ಷಕರು ಪತ್ರಿಕೆ–2 | 13.06.2015 | ಮಧ್ಯಾಹ್ನ 12 ರಿಂದ 2 ಗಂಟೆವರೆಗೆ |
| ದೈ.ಶಿ. ಗ್ರೇಡ್–1 ಪತ್ರಿಕೆ–2 | 13.06.2015 | ಮಧ್ಯಾಹ್ನ 3.30 ರಿಂದ 5.30 ಗಂಟೆವರೆಗೆ |

| | | |
|---|---|---|
| ಭೌತವಿಜ್ಞಾನ/ಜೀವವಿಜ್ಞಾನ ಪತ್ರಿಕೆ–2 | 14.06.2015 | ಬೆಳಗ್ಗೆ 09 ರಿಂದ 11 ಗಂಟೆವರೆಗೆ |
| ಕನ್ನಡ ಭಾಷಾ ಶಿಕ್ಷಕರು ಪತ್ರಿಕೆ–2 | 14.06.2015 | ಮಧ್ಯಾಹ್ನ 12 ರಿಂದ 2 ಗಂಟೆವರೆಗೆ |
| ಆಂಗ್ಲ ಭಾಷಾ ಶಿಕ್ಷಕರು ಪತ್ರಿಕೆ–2 | 14.06.2015 | ಮಧ್ಯಾಹ್ನ 3.30 ರಿಂದ 5.30 ಗಂಟೆವರೆಗೆ |
| ಹಿಂದಿ ಭಾಷಾ ಶಿಕ್ಷಕರು ಪತ್ರಿಕೆ–2 | 15.06.2015 | ಬೆಳಗ್ಗೆ 09 ರಿಂದ 11 ಗಂಟೆವರೆಗೆ |
| ಸಂಸ್ಕೃತ/ಉರ್ದು/ತಮಿಳು/ತೆಲುಗು ಪತ್ರಿಕೆ–2 | 15.06.2015 | ಮಧ್ಯಾಹ್ನ 12 ರಿಂದ 2 ಗಂಟೆವರೆಗೆ |

**v) ಪರೀಕ್ಷಾ ಮಾಧ್ಯಮ: ಕನ್ನಡ ಮತ್ತು ಆಂಗ್ಲ ಮಾಧ್ಯಮ**

**vi) ಪ್ರಶ್ನೆಪತ್ರಿಕೆ, ಅಂಕಗಳು ಮತ್ತು ವಿಷಯ:** ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಕೆಳಕಂಡ ವಿಷಯಗಳನ್ನೊಳಗೊಂಡ ಪರೀಕ್ಷಾ ವಿಷಯಗಳು ಎರಡು ಪ್ರಶ್ನೆ ಪತ್ರಿಕೆಗಳನ್ನು ಹೊಂದಿರುತ್ತದೆ. ಒಂದನೇ ಪ್ರಶ್ನೆ ಪತ್ರಿಕೆಯು (ಪತ್ರಿಕೆ–1) 100 ಅಂಕಗಳನ್ನು ಒಳಗೊಂಡಿದ್ದು, ಎಲ್ಲಾ ವಿಷಯದ ಹುದ್ದೆಗಳಿಗೂ ಕಡ್ಡಾಯವಾಗಿರುತ್ತದೆ.

| ಕ್ರ.ಸಂ. | ಹುದ್ದೆಯ ಹೆಸರು | ವಿಷಯ | ಅಂಕಗಳು |
|---|---|---|---|
| 1 | **ಪ್ರೌಢಶಾಲಾ ಸಹಾಯಕ ಶಿಕ್ಷಕ ಗ್ರೇಡ್–2 (ಫಿಸಿಕಲ್ ಸೈನ್ಸ್, ಬಯಾಲಜಿಕಲ್ ಸೈನ್ಸ್, ಕಲಾ ಹಾಗೂ ಕನ್ನಡ, ಆಂಗ್ಲ, ಹಿಂದಿ, ಸಂಸ್ಕೃತ, ತಮಿಳು ಮತ್ತು ಉರ್ದು ಭಾಷಾ ಶಿಕ್ಷಕರ ಹುದ್ದೆಗಳು) / ದೈಹಿಕ ಶಿಕ್ಷಣ ಶಿಕ್ಷಕ ಗ್ರೇಡ್–1** | **<u>ಒಂದನೇ ಪ್ರಶ್ನೆ ಪತ್ರಿಕೆ</u>**<br>ಸಾಮಾನ್ಯ ಜ್ಞಾನ<br>ಶೈಕ್ಷಣಿಕ ಮನೋವಿಜ್ಞಾನ<br>ಮೆಂಟಲ್ ಎಬಿಲಿಟಿ<br>ಕಂಪ್ಯೂಟರ್ ಜ್ಞಾನ | **100** |
| 2 | **ಕಲಾ ಶಿಕ್ಷಕರು** | **<u>ಎರಡನೇ ಪ್ರಶ್ನೆ ಪತ್ರಿಕೆ</u>**<br>ಇತಿಹಾಸ, ಭೂಗೋಳ ಶಾಸ್ತ್ರ, ಅರ್ಥಶಾಸ್ತ್ರ<br>ಪೌರನೀತಿ | **100** |
| 3 | **ಭಾಷಾ ಶಿಕ್ಷಕರ ಹುದ್ದೆಗಳಿಗೆ** | ಕನ್ನಡ / ಇಂಗ್ಲೀಷ್/ ಹಿಂದಿ/ ಸಂಸ್ಕೃತ/ಉರ್ದು | **100** |
| 4 | **ಫಿಸಿಕಲ್ ಸೈನ್ಸ್ ( ಭೌತ ವಿಜ್ಞಾನ )** | ಭೌತ ಶಾಸ್ತ್ರ ಮತ್ತು ಗಣಿತ ಶಾಸ್ತ್ರ | **100** |
| 5 | **ಬಯಾಲಾಜಿಕಲ್ ಸೈನ್ಸ್ (ಜೀವ ವಿಜ್ಞಾನ )** | ರಸಾಯನ ಶಾಸ್ತ್ರ, ಪ್ರಾಣಿ ಶಾಸ್ತ್ರ, ಸಸ್ಯಶಾಸ್ತ್ರ | **100** |
| 6 | **ದೈಹಿಕ ಶಿಕ್ಷಣ ಗ್ರೇಡ್–1 ಶಿಕ್ಷಕರು** | ದೈಹಿಕ ಶಿಕ್ಷಣದ ಇತಿಹಾಸ, ತತ್ವಗಳು ಮತ್ತು ತತ್ವಜ್ಞಾನ, ದೈಹಿಕ ಶಿಕ್ಷಣದ ಆಡಳಿತ ಮತ್ತು ಸಂಘಟನೆ, ದೈಹಿಕ ಶಿಕ್ಷಣದ ಮನೋಜ್ಞಾನ ಸಾಮಾಗ್ರಿ ಮತ್ತು ಬೋಧನಾ ವಿಧಾನ, ಅಂಗರಚನಾಶಾಸ್ತ್ರ, ಅಂಗಕಾರ್ಯಶಾಸ್ತ್ರ ಮತ್ತು ಜೀವಶಾಸ್ತ್ರ, ಆರೋಗ್ಯ ಶಿಕ್ಷಣ, ಸುರಕ್ಷಣಾ ಶಿಕ್ಷಣ ಮತ್ತು ಅಂಗೆಲಸ ವ್ಯಾಯಮ, ಕ್ರೀಢಾಧಿಕಾರತ್ವ ಮತ್ತು ಕ್ರೀಡಾ ತರಬೇತಿ ತತ್ವಗಳು | **100** |

**<u>ಪ್ರಶ್ನೆಗಳ ವ್ಯಾಪ್ತಿ ಹಾಗೂ ಸ್ವರೂಪ:</u>** 1) ಪ್ರಶ್ನೆಗಳು ನಿಗದಿಪಡಿಸಲಾಗಿರುವ ಪಠ್ಯವಸ್ತುವಿನ ವ್ಯಾಪ್ತಿಯಲ್ಲಿರುತ್ತದೆ.

2) ಪ್ರಶ್ನೆಗಳು ವಸ್ತುನಿಷ್ಠವಾಗಿದ್ದು ಪ್ರತಿ ಪ್ರಶ್ನೆಗೆ ಒಂದು ಅಂಕ ನಿಗದಿಪಡಿಸಿದೆ.

3) ಪ್ರತಿ ಪ್ರಶ್ನೆ 4 ಉತ್ತರಗಳನ್ನು ಹೊಂದಿದ್ದು ಇವುಗಳಲ್ಲಿ ಒಂದು ಸರಿ ಉತ್ತರವಾಗಿರುತ್ತದೆ.

4) ಉತ್ತರಗಳನ್ನು **"ಓ.ಎಂ.ಆರ್."** ಶೀಟಿನಲ್ಲಿ ಗುರ್ತಿಸುವುದು.

**ಭಾಷಾ ವಿಷಯ ಹೊರತುಪಡಿಸಿ ಇತರೆ ಎಲ್ಲಾ ವಿಷಯಗಳ ಪ್ರಶ್ನೆ ಪತ್ರಿಕೆಗಳು ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿರುತ್ತವೆ. ಭಾಷಾ ವಿಷಯಕ್ಕೆ ಸಂಬಂಧಿಸಿದಂತೆ ಆಯಾ ಭಾಷೆಯಲ್ಲಿರುತ್ತವೆ.**

**14.<u>ಆಯ್ಕೆ ವಿಧಾನ:</u>**

ಅಭ್ಯರ್ಥಿಗಳನ್ನು **"<u>ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ (ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್) (ರಿಕ್ರೂಟ್‌ಮೆಂಟ್) (ಅಮೆಂಡ್‌ಮೆಂಟ್) ರೂಲ್ಸ್ 2002</u>"** ನಿಯಮಗಳ ಅನ್ವಯ ಮೆರಿಟ್ ಮತ್ತು ಕರ್ನಾಟಕ ಸರ್ಕಾರದ ಪ್ರಚಲಿತ ಮೀಸಲಾತಿ ನಿಯಮಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**<u>15.ಅರ್ಹತೆ ನಿರ್ಧರಿಸುವುದು:–</u>**

**ಅ) <u>ಪ್ರೌಢಶಾಲಾ ಸಹಾಯಕ ಶಿಕ್ಷಕ ಗ್ರೇಡ್–2 ವೃಂದ (ಕಲಾ, ಭೌತ ವಿಜ್ಞಾನ, ಜೀವ ವಿಜ್ಞಾನ ಮತ್ತು ಭಾಷೆಗಳು) ಶಿಕ್ಷಕರ ವಿವಿಧ ಮಾಧ್ಯಮದ ಹುದ್ದೆಗಳಿಗೆ:–</u>**

ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಪಡೆದ ಒಟ್ಟು ಅಂಕಗಳ ಶೇಕಡ **70%,** ಮತ್ತು ಬಿ.ಎ/ಬಿ.ಎಸ್ಸಿ. ಪದವಿ ಪರೀಕ್ಷೆಯ ಒಟ್ಟು ಅಂಕಗಳ ಶೇಕಡ **20%,** ಹಾಗೂ ಬಿ.ಎಡ್. ಪದವಿ ಪರೀಕ್ಷೆಯಲ್ಲಿ ಪಡೆದಿರುವ ಒಟ್ಟು ಅಂಕಗಳ ಶೇಕಡ **10%,** ರಷ್ಟು, ಈ ಮೂರು ಒಟ್ಟು ಅಂಕಗಳ ಮೇಲೆ ಮೆರಿಟ್ ಪಟ್ಟಿ ತಯಾರಿಸಿ, ಪ್ರಚಲಿತ ಮೀಸಲಾತಿ ನಿಯಮಗಳ ಅನ್ವಯ ಆಯ್ಕೆ ಮಾಡಲಾಗುವುದು.

ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ 70% ಗೆ ಅಂಕಗಳನ್ನು ಲೆಕ್ಕಾಚಾರ ಮಾಡುವಾಗ ಪ್ರಥಮ ಪತ್ರಿಕೆ ಹಾಗೂ ದ್ವಿತೀಯ ಪತ್ರಿಕೆಯಲ್ಲಿ ಪಡೆದ ಅಂಕಗಳನ್ನು ಪ್ರತ್ಯೇಕವಾಗಿ ಲೆಕ್ಕಾಚಾರ ಮಾಡಿ ಶೇಕಡವಾರು ಅಂಕಗಳನ್ನು ನಿಗಧಿಪಡಿಸಲಾಗುವುದು. ಈ ರೀತಿ ನಿಗಧಿಪಡಿಸಲಾದ ಎರಡು ಪತ್ರಿಕೆಗಳ ಶೇಕಡವಾರು ಅಂಕಗಳನ್ನು ಕೂಡಿಸಿ ಅವುಗಳ ಸರಾಸರಿ ಅಂಕಗಳನ್ನು ತೆಗೆದುಕೊಳ್ಳಲಾಗುವುದು.

ಮೇಲ್ಕಂಡಂತೆ ಮೆರಿಟ್ ಲಿಸ್ಟ್ ತಯಾರಿಸುವಾಗ ಅಭ್ಯರ್ಥಿಯು **ಸರ್ಕಾರಿ ಪ್ರೌಢ ಶಾಲೆಗಳಲ್ಲಿ** ಸಂಬಂಧಿಸಿದ ವಿಷಯದಲ್ಲಿ "ಅರೆಕಾಲಿಕ ಅಥವಾ ಗೌರವ" ಶಿಕ್ಷಕರಾಗಿ, ಅಥವಾ ಭಾರತೀಯ ಜನಗಣತಿ ಸಂಸ್ಥೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಸಕ್ಷಮ ಪ್ರಾಧಿಕಾರದಿಂದ ನೇಮಕಗೊಂಡು ಹಾಲಿ ಸೇವೆ ಸಲ್ಲಿಸುತ್ತಿದ್ದಲ್ಲಿ / ಸೇವೆ ಸಲ್ಲಿಸಿದ್ದಲ್ಲಿ ಹಾಗೆ ಸೇವೆ ಸಲ್ಲಿಸಿದ ಪೂರ್ಣಗೊಂಡ ಪ್ರತಿ ಒಂದು ವರ್ಷದ ಸೇವೆಗೆ ಶೇಕಡ **2%** ರಷ್ಟು ಕೃಪಾಂಕಗಳನ್ನು ನೇಮಕಾತಿ ನಿಯಮಗಳ ಪ್ರಕಾರ ಅರ್ಹತೆ ಇದ್ದಲ್ಲಿ ಮಾತ್ರ ಮೇಲಿನ ಕಂಡಿಕೆಯಲ್ಲಿ ವಿವರಿಸಿರುವ ಒಟ್ಟು ಅಂಕಗಳಿಗೆ ಸೇರಿಸಲಾಗುವುದು.

**ವಿವರಣೆ:–ಅ)** ಮೊದಲಿಗೆ, ಬಿ.ಎ/ಬಿ.ಎಸ್ಸಿ. ಪದವಿ ಪರೀಕ್ಷೆಯ ಎಲ್ಲಾ ವರ್ಷಗಳಲ್ಲಿ, ಎಲ್ಲಾ ವಿಷಯಗಳಲ್ಲಿ ಪಡೆದಿರುವ ಒಟ್ಟು ಅಂಕಗಳನ್ನು ಶೇಕಡ 20%ಕ್ಕೆ ಲೆಕ್ಕ ಹಾಕಲಾಗುವುದು.

**ಆ)** ಬಿ.ಇಡಿ., ಪದವಿ ಪರೀಕ್ಷೆಯಲ್ಲಿ ಪಡೆದ ಒಟ್ಟು ಅಂಕಗಳನ್ನು ಶೇಕಡ 10%ಕ್ಕೆ ಲೆಕ್ಕ ಹಾಕಲಾಗುವುದು.

**ಇ)** ನಂತರ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಪಡೆದ ಒಟ್ಟು ಅಂಕಗಳನ್ನು ಶೇಕಡ 70%ಕ್ಕೆ ಲೆಕ್ಕ ಹಾಕಲಾಗುವುದು.

**ಈ)** ಬಿ.ಎ/ಬಿ.ಎಸ್ಸಿ/ಬ್ಯಾಚುಲರ್ ಪದವಿ/ತತ್ಸಮಾನ ಪರೀಕ್ಷೆಯ ಶೇಕಡ 20%, ಬಿ.ಇಡಿ., ಪದವಿಯ/ಬಿ.ಪಿ.ಇಡಿ.,/ತತ್ಸಮಾನ ಪರೀಕ್ಷೆಯ ಶೇಕಡ 10%, ಮತ್ತು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಶೇಕಡ 70% ಅಂಕಗಳನ್ನು ಸೇರಿಸಿ ಒಟ್ಟು ಶೇಕಡ 100 ಅಂಕಕ್ಕೆ ಪಡೆದ ಅಂಕಗಳನ್ನು ಕಂಡುಕೊಳ್ಳಲಾಗುವುದು. ಮತ್ತು ಮೆರಿಟಿಗೆ ಪರಿಗಣಿಸಲಾಗುವುದು.

**ಉ)** ಮೇಲಿನ ಒಟ್ಟು ಶೇಕಡ ಅಂಕಗಳಿಗೆ (ಪ್ಯಾರ **"ಈ"**), ಅರೆಕಾಲಿಕ ಅಥವಾ ಗೌರವ ಶಿಕ್ಷಕ/ಭಾರತೀಯ ಜನಗಣತಿಯಲ್ಲಿ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸಿದಂತಹ ಅಭ್ಯರ್ಥಿಗಳಿಗೆ ಪ್ರಸ್ತುತ ನೇಮಕಾತಿ ನಿಯಮಗಳ ಪ್ರಕಾರ ಅರ್ಹತೆ ಇದ್ದಲ್ಲಿ ಮಾತ್ರ ಪ್ರತಿ ಪೂರ್ಣಗೊಂಡ ಒಂದು ವರ್ಷದ ಸೇವೆಗೆ ಶೇಕಡ 2% ರಂತೆ ಕೃಪಾಂಕಗಳನ್ನು ಸೇರಿಸಲಾಗುವುದು.

16. **ಮೀಸಲಾತಿ ಅವಕಾಶಗಳು:–**

ಅ) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 08 ಸಹಿಮ 95 ದಿನಾಂಕ 20–06–1995 ಮತ್ತು ನಂತರ ಹಾಲಿ ಜಾರಿಯಲ್ಲಿರುವ ಮೀಸಲಾತಿ ನಿಯಮಗಳ ಪ್ರಕಾರ ಲಭ್ಯವಿರುವ ರಿಕ್ತ ಸ್ಥಾನಗಳನ್ನು ಈ ಕೆಳಕಂಡ ಪ್ರಮಾಣದಲ್ಲಿ ನಿಯಮಾನುಸಾರ ಮೀಸಲಿರಿಸಲಾಗಿದೆ.

| | |
|---|---|
| **ಸಾಮಾನ್ಯ ಅರ್ಹತೆ** | **ಶೇ.** 50 |
| **ಪರಿಶಿಷ್ಟ ಪಂಗಡ** | **ಶೇ.** 03 |
| **ಪರಿಶಿಷ್ಟ ಜಾತಿ** | **ಶೇ.** 15 |
| **ಪ್ರವರ್ಗ–1** | **ಶೇ.** 04 |
| **ಪ್ರವರ್ಗ–2ಎ** | **ಶೇ.** 15 |
| **ಪ್ರವರ್ಗ–2ಬಿ** | **ಶೇ.** 04 |
| **ಪ್ರವರ್ಗ–3ಎ** | **ಶೇ.** 04 |
| **ಪ್ರವರ್ಗ–3ಬಿ** | **ಶೇ.** 05 |
| **ಒಟ್ಟು** | 100 |

**ಮೀಸಲಾತಿ ಸೌಲಭ್ಯ ಪಡೆಯಲು ಅಭ್ಯರ್ಥಿಗಳು ಸಲ್ಲಿಸಬೇಕಾದ ಪ್ರಮಾಣ ಪತ್ರಗಳು:**

| | | |
|---|---|---|
| 1 | ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು | **ನಮೂನೆ– ಡಿ** (ನಿಯಮ 3ಎ(2)(3), ಸರಕಾರದ ಆದೇಶ ಸಂಖ್ಯೆ: ಎಸ್‌ಡಬ್ಲೂಡಿ 132 ಎಸ್ಎಡಿ 97 ದಿನಾಂಕ 08–02–2000 |
| 2 | ಹಿಂದುಳಿದ ಪ್ರವರ್ಗ–1 ಕ್ಕೆ ಸೇರಿದ ಅಭ್ಯರ್ಥಿಗಳು | **ನಮೂನೆ–ಇ** (ನಿಯಮ 3ಎ(2)(3), ಸರಕಾರದ ಆದೇಶ ಸಂಖ್ಯೆ: ಎಸ್‌ಡಬ್ಲೂಡಿ 132 ಎಸ್ಎಡಿ 97 ದಿನಾಂಕ 08–02–2000 |
| 3 | ಹಿಂದುಳಿದ ಪ್ರವರ್ಗ 2ಎ, 2ಬಿ, 3ಎ, ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳು | **ನಮೂನೆ–ಎಫ್** (ನಿಯಮ 3ಎ(2)(3), ಸರಕಾರದ ಆದೇಶ ಸಂಖ್ಯೆ: ಎಸ್‌ಡಬ್ಲೂಡಿ 126 ಎಸ್ಎಡಿ 97 ದಿನಾಂಕ 13–02–2003 |

ಅಭ್ಯರ್ಥಿಗಳು ಮೇಲೆ ನಿಗದಿಪಡಿಸಿರುವ ನಿಗದಿತ ನಮೂನೆಗಳಲ್ಲಿಯೇ ಸಂಬಂಧಿಸಿದ ವ್ಯಾಪ್ತಿಯ ತಹಸೀಲ್ದಾರರ ದರ್ಜೆಗಿಂತ ಕಡಿಮೆ ಇಲ್ಲದ ರೆವಿನ್ಯೂ ಪ್ರಾಧಿಕಾರಿಯಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

**ಮೇಲ್ಕಂಡ ಮೀಸಲಾತಿ ಪ್ರಮಾಣ ಪತ್ರಗಳು ಚಾಲ್ತಿಯಲ್ಲಿರುವ ನಿಯಮಗಳ ಪ್ರಕಾರವಿರಬೇಕು ಮತ್ತು ಅವಧಿ ಮೀರಿದ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು.**

ಆ) ಮೇಲೆ ವಿವರಿಸಿರುವ ಪ್ರಕಾರ ಸಾಮಾನ್ಯ ಅರ್ಹತೆ ಸೇರಿದಂತೆ ಪ್ರತಿ ಮೀಸಲಾತಿ ಪ್ರವರ್ಗಗಳಿಗೆ ಈ ಕೆಳಕಂಡ ಆದೇಶಗಳ ಪ್ರಕಾರ **"ಸಮತಳ ಮೀಸಲಾತಿ"** (Horizontal reservation) ಅನ್ವಯ ಹುದ್ದೆಗಳನ್ನು ವರ್ಗೀಕರಿಸಲಾಗಿದೆ.

| | | | |
|---|---|---|---|
| 1 | ಮಾಜಿ ಸೈನಿಕರಿಗೆ | ಶೇಕಡ 10 | ಕರ್ನಾಟಕ ಸಿವಿಲ್ ಸರ್ವೀಸಸ್ (ಜನರಲ್ ರೆಕ್ರೂಟ್‌ಮೆಂಟ್) ರೂಲ್ಸ್ 1977ರ ನಿಯಮ 9(1)ರ ಅನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002.ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:–04–01–2008 |
| 2 | ಅಂಗವಿಕಲರಿಗೆ | ಶೇಕಡ 5 | ಕರ್ನಾಟಕ ಸಿವಿಲ್ ಸರ್ವೀಸಸ್ (ಜನರಲ್ ರೆಕ್ರೂಟ್‌ಮೆಂಟ್) ರೂಲ್ಸ್ 1977 ನಿಯಮ 9(1)(ಎ)ರ ಅನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002. ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:–04–01–2008 |
| 3 | ಮಹಿಳಾ ಅಭ್ಯರ್ಥಿಗಳಿಗೆ | ಶೇಕಡ 30 | ಕರ್ನಾಟಕ ಸಿವಿಲ್ ಸರ್ವೀಸಸ್ (ಜನರಲ್ ರೆಕ್ರೂಟ್‌ಮೆಂಟ್) ರೂಲ್ಸ್ 1977ರ ನಿಯಮ 9(1)(ಬಿ) ಮತ್ತು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002. ಹಾಗೂ ಸರ್ಕಾರದ ಸುತ್ತೋಲೆ ಸಂಖ್ಯೆ ಸಿಆಸುಇ 16/ಸೇನೇನಿ 2008 ದಿನಾಂಕ 01–09–2008 ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007ದಿನಾಂಕ:–04–01–2008 |
| 4 | ಯೋಜನೆಗಳಿಂದ ನಿರಾಶ್ರಿತರಾದವರ ಕುಟುಂಬದವರ ಅಭ್ಯರ್ಥಿಗಳಿಗಾಗಿ | ಶೇಕಡ 5 | ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 23 ಎಸ್‌ಆರ್‌ಆರ್ 99 ದಿನಾಂಕ 23–11–2000 ಮತ್ತು ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002 ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:–04–01–2008 |
| 5 | ಗ್ರಾಮೀಣ ಅಭ್ಯರ್ಥಿಗಳಿಗೆ | ಶೇಕಡ 25 | 2000ದ ಕರ್ನಾಟಕ ಗ್ರಾಮೀಣ ಅಭ್ಯರ್ಥಿಗಳಿಗಾಗಿ (ರಾಜ್ಯ ಸಿವಿಲ್ ಸೇವೆಗಳಲ್ಲಿ ನೇಮಕಾತಿ ಅಥವಾ ಹುದ್ದೆಗಳ ಮೀಸಲಾತಿ ವಿಧೇಯಕ) ಹಾಗೂ ಸರಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002 ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:–04–01–2008 |
| 6 | ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗಾಗಿ | ಶೇಕಡ 5 | ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 71 ಎಸ್‌ಆರ್‌ಆರ್ 2001 ದಿನಾಂಕ 24–10–2002 ಮತ್ತು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002 ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:–04–01–2008 |

**17. ಮಾಜಿ ಸೈನಿಕರ ಗುಂಪಿನಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳಿಗೆ ಸೂಚನೆಗಳು:**

**"ಮಾಜಿ ಸೈನಿಕ"ರಿಗಾಗಿ ಮೀಸಲಿಟ್ಟ ಖಾಲಿ ಹುದ್ದೆಗಳನ್ನು ಮಿಲಿಟರಿ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿಗಳಿಂದ ಮತ್ತು ಭಾರತ ದೇಶದ ಒಕ್ಕೂಟದ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ಅಂಗಹೀನರಾದ ವ್ಯಕ್ತಿಗಳ ಕುಟುಂಬದ ಸದಸ್ಯರಿಂದ ನೇಮಕಾತಿ ಮೂಲಕ ತುಂಬಲಾಗುತ್ತದೆ.**

**ಮಾಜಿ ಸೈನಿಕರ ಗುಂಪಿನಲ್ಲಿ ಕೆಳಕಂಡವರು ಆಯ್ಕೆಗೆ ಅರ್ಹರು:–**

1) ಮಾಜಿ ಸೈನಿಕ ಎಂದರೆ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಅಯೋಧನಾಗಿ) ಸೇವೆ ಸಲ್ಲಿಸಿದ ವ್ಯಕ್ತಿ. ಅಂದರೆ:–

(ಅ) ಅಂತಹ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ ವ್ಯಕ್ತಿ.

**ಅಥವಾ**

(ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಗೆ ಅನರ್ಹನಾದವನೆಂದೋ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಸೇವೆಯಿಂದ ಬಿಡುಗಡೆಯಾದ ವ್ಯಕ್ತಿ.

**ಅಥವಾ**

(ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

**ಅಥವಾ**

(ಈ) ತನ್ನ ಸ್ವಂತ ಕೋರಿಕೆಯ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದು ಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ಧಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ.

**2) <u>ಮಾಜಿ ಸೈನಿಕ ಅವಲಂಬಿತರ ಗುಂಪಿನಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳು ಅಂದರೆ:–</u>**

ಕೇಂದ್ರ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು.

**(ಸಂಬಂಧಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು ಮಾಜಿ ಸೈನಿಕರ ಅವಲಂಬಿತರಡಿಯಲ್ಲಿ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ ಅಂತಹವರಿಗೆ ವಯೋಮಿತಿ ಸಡಿಲಿಕೆ ಇಲ್ಲ)**

**3) <u>ಮಾಜಿ ಸೈನಿಕ ಗುಂಪಿನಲ್ಲಿ ಆಯ್ಕೆ ಹೊಂದಲು ಈ ಕೆಳಕಂಡವರು ಅರ್ಹರಲ್ಲ:</u>**

ಅ) ಈ ಸೌಲಭ್ಯಕ್ಕೆ ಡಿಫೆನ್ಸ್ ಸೆಕ್ಯುರಿಟಿ ಕೋರ್ಸ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಕೋರ್ಸ್ ಲೋಕ ಸಹಾಯಕ ಸೇವೆ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಅರ್ಹರಲ್ಲ.

ಆ) ಕೇಂದ್ರ ಸಶಸ್ತ್ರದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಪುನರ್ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ, ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗೆ ನೇಮಕ ಹೊಂದುವಂತಿಲ್ಲ.

**<u>ಸೂಚನೆ:</u>**

**"ಮಾಜಿ ಸೈನಿಕ" "ಸಶಸ್ತ್ರ ದಳದ ಸದಸ್ಯ" ಮತ್ತು "ಕುಟುಂಬದ ಸದಸ್ಯ"** ಎಂಬ ಪದಗಳ ಅರ್ಥವು ಕಾಲದಿಂದ ಕಾಲಕ್ಕೆ ತಿದ್ದುಪಡಿಯಾದ **<u>ಕರ್ನಾಟಕ ರಾಜ್ಯ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977</u>** ರಲ್ಲಿ ವಿವರಿಸಿರುವಂತೆ ಇರುತ್ತದೆ.

18. **<u>ಅಂಗವಿಕಲ ಅಭ್ಯರ್ಥಿಗಳಿಗೆ ಸೂಚನೆ:–</u>**

ಕರ್ನಾಟಕ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಎಂಎಂಡಬ್ಲ್ಯೂ. 107. ಪಿಹೆಚ್‌ಪಿ 2003 ದಿನಾಂಕ: 11–07–2003 ಮತ್ತು ಡಿಪಿಎಆರ್ 50 ಎಸ್‌ಆರ್‌ಆರ್ 2000 ದಿನಾಂಕ: 03–09–2005ರ ಅನ್ವಯ ತಾನು **<u>"ಅಂಗವಿಕಲರ ಗುಂಪಿಗೆ ಸೇರಿದವರೆಂದು ಹೇಳಿಕೊಳ್ಳುವ ಅಭ್ಯರ್ಥಿಯು"</u>** ವೈದ್ಯಕೀಯ ಪ್ರಮಾಣ ಪತ್ರವನ್ನು ಹೊಂದಿರಬೇಕು. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್.ಸಿಆಸುಇ 50 ಎಸ್.ಆರ್.ಆರ್. 2007, ದಿನಾಂಕ 26–07–2011ರಲ್ಲಿ ನಿಗದಿಪಡಿಸಿರುವ ಅಂಗವಿಕಲ ಅಭ್ಯರ್ಥಿಗಳನ್ನು ಮಾತ್ರ ಪರಿಗಣಿಸಲಾಗುವುದು. ಸರ್ಕಾರಿ ಆದೇಶ ಸಂಖ್ಯೆ ಎಂ.ಎ.ಇ107 /ಪಿ.ಹೆಚ್.ಪಿ /2003 ದಿನಾಂಕ 11/7/2003 ರಲ್ಲಿ ನಿಗಧಿಪಡಿಸಿರುವ ನಮೂನೆಯಲ್ಲಿ ವೈದ್ಯಕೀಯ ಪ್ರಮಾಣ ಪತ್ರಗಳನ್ನು ಸಕ್ಷಮ ಜಿಲ್ಲಾ ವೈದ್ಯಕೀಯ ಮಂಡಳಿಯಿಂದ ಪಡೆದಿರಬೇಕು. ಈ ಪ್ರಮಾಣ ಪತ್ರವನ್ನು ಅರ್ಜಿ ಸಲ್ಲಿಸುವ ದಿನಾಂಕಕ್ಕೆ ಅಭ್ಯರ್ಥಿಯು ಪಡೆದುಕೊಂಡಿರಬೇಕು.

ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 50 ಎಸ್.ಆರ್.ಆರ್ 2007 ದಿನಾಂಕ: 26.07.2011 ರಲ್ಲಿ ರಾಜ್ಯ ಸರ್ಕಾರವು ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಅಂಗವಿಕಲರು ನಿರ್ವಹಿಸಬಹುದಾದ ಹುದ್ದೆಗಳನ್ನು ಗುರುತಿಸಿದೆ. ಸದರಿ ಅಧಿಸೂಚನೆಯಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ಅಂಗವಿಕಲ ಅಭ್ಯರ್ಥಿಗಳಿಗೆ ಗುರುತಿಸಿರುವ ಹುದ್ದೆಗಳ ಉದ್ಧೃತ ಭಾಗವನ್ನು ಈ ಕೆಳಗೆ ನೀಡಲಾಗಿದೆ.

| Blind | Low Vision | Leprosy Cured | Hearing Impaired | Locomotor Disablity | Mentally ill | Mentally Retarded |
|---|---|---|---|---|---|---|
| Primary School Music Teacher,<br><br>Secondary School Asistant Grade-II, Asistant Masters-(Arts) (Languages)<br>Special Teacher Grade-II, Drama Teachers, Dance Teachers, Music Teachers.<br>FDA, SDA | Primary School Music Teacher,<br>Asst.Masters-(General) (English) (Hindi)<br>Secondary School Asistant Grade-II, Asistant Masters-(Arts) (Languages)<br>Special Teacher Grade-II, Drama Teachers, Dance Teachers, Music Teachers.<br>FDA, SDA, Group D Posts, Peon. | Primary School Assistant Masters (General) (Science) (English) (Hindi) Drawing Teacher<br>Secondary School Asistant Grade-II Asistant Masters-(Arts) (Physical Science) (Biological Science) (Languages)<br>Special Teacher Grade-II, Drawing Teachers, Drama Teachers, Dance Teachers, Craft Teachers, Music Teachers.<br>FDA, SDA, Typist, Steno & Group D. | Primary School Asst.Masters-(General) (English) (Hindi) Drawing Teachers.<br>Secondary School Asistant Grade-II,<br>Assistant Masters (Languages)<br>Physical Education Teacher Grade-1,<br>Special Teacher Grade-II, Drawing Teachers, Drama Teachers, Dance Teachers, Craft Teachers.<br>FDA, SDA, Typist, Group D. | Primary School Asst.Masters-(General)<br>(Science)<br>(English) (Hindi) Drawing Teachers.<br>Secondary School Asistant Grade-II, Asistant Masters-(Arts) (Physical Science) (Biological Science)<br>(Languages)<br>Special Teacher Grade-II, Drawing Teachers, Drama Teachers, Dance Teachers, Craft Teacghers, Music Teachers.<br>FDA, SDA,<br>Typist, Steno & Group D posts. | FDA,<br>SDA, Group-D Posts. | - |

1. ದೈಹಿಕ ಅಂಗವಿಕಲ ಅಭ್ಯರ್ಥಿಗಳು ಸರ್ಕಾರಿ ಜಿಲ್ಲಾ ಆಸ್ಪತ್ರೆಗಳಲ್ಲಿರುವ ಮೂಳೆ ತಜ್ಞ (Orthopaedic Surgeon) ರಿಂದ ದೈಹಿಕ ಅಂಗವಿಕಲತೆಯ ಮೌಲೀಕರಣವನ್ನು Alimco Kanpur( W.H.O Standard) ಇದರ ಆಧಾರದ ಮೇಲೆ ಮಾಡಿಸುವುದು ಕಡ್ಡಾಯವಾಗಿರುತ್ತದೆ. ಹಾಗೂ ಶ್ರವಣ ದೋಷ ಹೊಂದಿರುವ ಅಂಗವಿಕಲ ಅಭ್ಯರ್ಥಿಗಳ ಪ್ರಮಾಣ ಪತ್ರದಲ್ಲಿ ಶ್ರವಣ ದೋಷದ ಪ್ರಮಾಣವನ್ನು ಡೆಸಿಬಲ್ಸ್ (Decibel) ಗಳಲ್ಲಿ ಕಡ್ಡಾಯವಾಗಿ ನಮೂದಿಸತಕ್ಕದ್ದು.
2. ಅಂಧ ಮತ್ತು ಮಂದ ದೃಷ್ಟಿಯ ಅಭ್ಯರ್ಥಿಗಳ ಅಂಗವಿಕಲತೆಯ ಕುರಿತು ಈ ಕೆಳಗಿನಂತೆ ವಿವರಿಸಲಾಗಿದೆ.

**VISUAL DISABILITY**

1. Definition: Blindness refers to a condition where a person suffers from any of the condition , namely

i) total absence of sight: or

ii) visual acuity not exceeding 6/60 of 20/200 (snellen) in the better eye with best correcting lenses: or

iii) Limitation of field of vision subtending an angle of 20 degree or worse :

2. **Low Vision**: Persons with low vision means a person with a impairment of vision of less than 6/18 to 6/60 with best correction in the better eye of impairment of field in anyone of the following categories:-

a) reduction of fields less than 50 degrees

b) Heminaopia with macular involvement

c) Altitudinal defect involving lower fields.

3. Categories of Visual Disability All with Correction

| Category | Better Eye | Worse eye | % age impairment |
|---|---|---|---|
| Category 0 | 6/9-6/18 | 6/24 to 6/36 | 20% |
| Category I | 6/18-6/36 | 6/60 to Nil | 40% |
| Category II | 6/40-4/60 Or Field Of vision 10*-20* | 3/60 to Nil | 75% |
| Category III | 3/60 to 1/60 or Field Of vision 10* | F:C at 1 ft to Nil | 100% |
| Category IV | F:C at 1 ft to Nil or Field Of vision 10* | F:C at 1 ft to Nil | 100% |
| One Eyed Persons | 6/6 | F:C at 1 ft to Nil or Field Of vision 10* | 30% |

Note: F:C Means Finger Count

19. **ಗ್ರಾಮೀಣ ಅಭ್ಯರ್ಥಿಗಳಿಗೆ ಸೂಚನೆಗಳು :–**

ಗ್ರಾಮೀಣ ಅಭ್ಯರ್ಥಿ ಎಂದರೆ ಕರ್ನಾಟಕ ಪೌರ ನಿಯಮಗಳ ಅಧಿನಿಯಮ 1976 ಅಥವಾ ಕರ್ನಾಟಕ ಪೌರ ಸಭೆಗಳ ಅಧಿನಿಯಮ 1964 ರಡಿಯಲ್ಲಿ ನಿರ್ದಿಷ್ಟಪಡಿಸಿದ ಒಂದು ದೊಡ್ಡ ನಗರ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆ ಹಂತದಲ್ಲಿರುವ ಪ್ರದೇಶ ಹೊರತಾಗಿ ಇತರೆ ಯಾವುದೇ ಪ್ರದೇಶದಲ್ಲಿರುವ ಶಾಲೆಯಲ್ಲಿ 1 ನೇ ತರಗತಿಯಿಂದ 10 ನೇ ತರಗತಿಯವರೆಗೆ ವ್ಯಾಸಂಗ ಮಾಡಿದ ಅಭ್ಯರ್ಥಿ.

ಗ್ರಾಮೀಣ ಅಭ್ಯರ್ಥಿಗಳ ಮೀಸಲಾತಿ ಅಡಿಯಲ್ಲಿ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಸಂಬಂಧಿಸಿದ ಪ್ರಮಾಣ ಪತ್ರಗಳನ್ನು **ಸರಕಾರದ ಆದೇಶ ಸಂಖ್ಯೆ: ಡಿಪಿಎಆರ್ 96 ಸೇನೆನಿ 2005 ದಿನಾಂಕ 10–08–2005** ರಲ್ಲಿ ನೀಡಿರುವ ನಿಗದಿತ ನಮೂನೆಯಲ್ಲಿ ಮಾತ್ರ ಸಲ್ಲಿಸಬೇಕು.

ಸದರಿ ಅಧಿನಿಯಮದಲ್ಲಿ **"ಗ್ರಾಮೀಣ ಅಭ್ಯರ್ಥಿಯನ್ನು"** ಈ ಕೆಳಗೆ ಉದ್ಧರಿಸಿದಂತೆ ಪರಿಭಾಷಿಸಲಾಗಿದೆ.

1) ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ–1 ರಲ್ಲಿ ಅಂದರೆ, ಮೇಲುಸ್ಥರದಲ್ಲಿ (**creamy layer**) ಬರುವದಿಲ್ಲವೆಂದು ಸಂಬಂಧಿಸಿದ ತಹಸೀಲ್ದಾರರವರಿಂದ ಪಡೆದ ಪ್ರಮಾಣ ಪತ್ರದ ಜೊತೆಗೆ ಸರಕಾರದ ಆದೇಶ ದಿನಾಂಕ 10–08–2005ರಲ್ಲಿ ನಿಗದಿಪಡಿಸಲಾದ ನಮೂನೆ–2 ರಲ್ಲಿ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

2) ಪ್ರವರ್ಗ–1, 2ಎ, 2ಬಿ, 3ಎ, 3ಬಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು ತಮ್ಮ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ಸರಕಾರದ ಆದೇಶ ದಿನಾಂಕ 10–08–2005ರಲ್ಲಿ ನಿಗದಿ ಪಡಿಸಲಾದ ನಮೂನೆ–2ರಲ್ಲಿ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಪಡೆದಿರಬೇಕು.

20. **ಯೋಜನಾ ನಿರಾಶ್ರಿತ ಕುಟುಂಬದ ಅಭ್ಯರ್ಥಿಗಳಿಗೆ ಸೂಚನೆಗಳು** :–

ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್.23.ಎಸ್‌ಆರ್‌ಆರ್.99, ಬೆಂಗಳೂರು ದಿನಾಂಕ 23–11–2000 ರನ್ವಯ ಯೋಜನಾ ನಿರಾಶ್ರಿತ ಕುಟುಂಬದ ಅಭ್ಯರ್ಥಿ ಮೀಸಲಾತಿ ಪಡೆಯಲಿಚ್ಛಿಸುವ ಅಭ್ಯರ್ಥಿಗಳು ಸರ್ಕಾರಿ ಸುತ್ತೋಲೆ ಸಂಖ್ಯೆ: ಸಿ.ಆ.ಸು.ಇ.:44:ಸೇ.ನೇನಿ ದಿನಾಂಕ:27–07–2001ರಲ್ಲಿ ನಿಗದಿಪಡಿಸಲಾದ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರ(ತಹಶೀಲ್ದಾರ್)ದಿಂದ ಅರ್ಜಿ ಸಲ್ಲಿಸುವ ಕೊನೆ ದಿನಾಂಕದೊಳಗೆ ಪಡೆದಿರಬೇಕು.

21. **ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗೆ ಸೂಚನೆಗಳು:–**

1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳು ಈ ಮೀಸಲಾತಿಗೆ ಅರ್ಹರಾಗುತ್ತಾರೆ. (1ನೇ ತರಗತಿಗೆ ದಾಖಲಾಗದೇ ನೇರವಾಗಿ ನಂತರದ ಹೆಚ್ಚಿನ ತರಗತಿಗೆ ದಾಖಲಾಗಿ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ್ದಲ್ಲಿ ಸಹ ಈ ಸೌಲಭ್ಯಕ್ಕೆ ಅರ್ಹರಾಗುವರು) ಈ ಅಭ್ಯರ್ಥಿಗಳು ಸಂಬಂಧಿಸಿದ ಮುಖ್ಯೋಪಾಧ್ಯಾಯರಿಂದ ದೃಢೀಕೃತ ಪ್ರಮಾಣ ಪತ್ರಗಳನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳವರ ಮೇಲು ಸಹಿಯೊಂದಿಗೆ ಸಲ್ಲಿಸತಕ್ಕದ್ದು. ಪ್ರಮಾಣ ಪತ್ರಗಳನ್ನು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು.

22. **ಎ) ಗೌರವ ಶಿಕ್ಷಕರ ಪ್ರಮಾಣ ಪತ್ರ:**

ಸರ್ಕಾರಿ ಪ್ರೌಢಶಾಲೆಗಳಲ್ಲಿ ಗೌರವ ಶಿಕ್ಷಕರಾಗಿ ಸಲ್ಲಿಸಿದ ಸೇವಾ ಅವಧಿಗೆ ಕೃಪಾಂಕ ಪಡೆಯಲಿಚ್ಛಿಸುವ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಸಂಬಂಧಿಸಿದ ಶಾಲೆಯ ಮುಖ್ಯಸ್ಥರಿಂದ ಪ್ರಮಾಣ ಪತ್ರವನ್ನು ಪಡೆದು, ಆಯಾ ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಜಿಲ್ಲಾ ಉಪನಿರ್ದೇಶಕರು (ಆಡಳಿತ) ಇವರಿಂದ ದೃಢೀಕರಿಸಿಕೊಂಡಿರಬೇಕು.

**ಬಿ) ಅರೆಕಾಲಿಕ ಶಿಕ್ಷಕರ ಪ್ರಮಾಣ ಪತ್ರ :–**

ಸರ್ಕಾರಿ ಪ್ರೌಢಶಾಲೆಗಳಲ್ಲಿ ಅರೆಕಾಲಿಕ ಶಿಕ್ಷಕರಾಗಿ ಸಲ್ಲಿಸಿದ ಸೇವಾ ಅವಧಿಗೆ ಕೃಪಾಂಕ ಪಡೆಯಲಿಚ್ಛಿಸುವ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಸಂಬಂಧಿಸಿದ ಶಾಲೆಯ ಮುಖ್ಯಸ್ಥರಿಂದ ಪ್ರಮಾಣ ಪತ್ರವನ್ನು ಪಡೆದು, ಆಯಾ ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಜಿಲ್ಲಾ ಉಪನಿರ್ದೇಶಕರು (ಆಡಳಿತ) ಇವರಿಂದ ದೃಢೀಕರಿಸಿಕೊಂಡಿರಬೇಕು.

**23. ಆಯ್ಕೆ ಪ್ರಕ್ರಿಯೇಯ ಪರೀಶೀಲನಾ ಪಟ್ಟಿ 1:2 ರಂತೆ :–**

ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿರುವ ಅಂಕಗಳ ವಿವರ, ಅರ್ಹತಾದಾಯಕ ಪರೀಕ್ಷೆಯಲ್ಲಿ ಪಡೆದಿರುವ ಅಂಕಗಳ ವಿವರ ಹಾಗೂ ಅಭ್ಯರ್ಥಿಯು ಅರ್ಜಿಯಲ್ಲಿ ಕ್ಲೇಮ್ ಮಾಡಿರುವ ಮೀಸಲಾತಿ ವಿವರಗಳನ್ನು ಒಳಗೊಂಡ ಪೂರ್ಣ ಮಾಹಿತಿಯನ್ನು ಇಲಾಖೆಯ ಅಧಿಕೃತ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು. ಅಭ್ಯರ್ಥಿಗಳು ಗಳಿಸಿರುವ ಅಂಕಗಳನ್ನು ಆಧರಿಸಿ ಪ್ರಕಟಿಸಿದ ಹುದ್ದೆಗಳಿಗೆ ಅನುಗುಣವಾಗಿ ಅಭ್ಯರ್ಥಿಗಳ ಮೂಲ ದಾಖಲೆಗಳ ಮೂಲ ದಾಖಲೆಗಳನ್ನು ಪರಿಶೀಲಿಸಲು ದಿನಾಂಕಗಳನ್ನು ಗೊತ್ತುಪಡಿಸಲಾಗುತ್ತದೆ. ಈ ಸಂಬಂದ ವೆಬ್ ಸೈಟ್ ಮತ್ತು ಆಯ್ಕೆ ಮತ್ತು ನೇಮಕಾತಿ ಪ್ರಾಧಿಕಾರಿಗಳ ಪ್ರಕಟಣೆ ಫಲಕವನ್ನು ನೋಡುತ್ತಿರುವುದು. ನಿಗಧಿತ ದಿನಾಂಕಗಳಂದು ಅಭ್ಯರ್ಥಿಯು ಖುದ್ದು ಹಾಜರಾಗಿ ಸ್ಥಳದಲ್ಲಿ ನೀಡುವ ಚೆಕ್ ಲಿಸ್ಟ್ ನಂತೆ ಭರ್ತಿ ಮಾಡಿ ದಾಖಲೆಗಳ ಪರಿಶೀಲನೆಗೆ ತಂಡದ ಮುಖ್ಯಸ್ಥರಿಗೆ ದಾಖಲೆಗಳನ್ನು ಸಲ್ಲಿಸಿ ಸ್ವೀಕೃತಿ ಪಡಯುವುದು. ಈ ಪ್ರಕ್ರಿಯೆಯ ನಂತರ ಅಭ್ಯರ್ಥಿಗಳು ದೊರೆಯದೇ ಹೋದಲ್ಲಿ ನಿಗದಿತ ಸಂಖ್ಯೆಯ ಮತ್ತು ಪ್ರತಿಶತ 10 ಅಧಿಕ ಸಂಖ್ಯೆಯ ಅಭ್ಯರ್ಥಿಗಳು ದೊರೆಯುವವರೆಗೆ ಮೇಲೆ ಹೇಳಿದ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ. ಹೀಗೆ ಪರಿಶೀಲನೆ ಪ್ರಕ್ರಿಯೆ ಪೂರ್ಣಗೊಂಡ ತರುವಾಯ ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಿಸಲಾಗುವುದು.

**<u>24. </u>ತಾತ್ಕಾಲಿಕ ಆಯ್ಕೆಪಟ್ಟಿ :–**

ಅರ್ಹತೆ (ಮೆರಿಟ್) ಮತ್ತು ಮೀಸಲಾತಿ ನಿಯಮಗಳನ್ವಯ ವಿವಿಧ ವರ್ಗದ ಹುದ್ದೆಗಳಿಗೆ ಅಭ್ಯರ್ಥಿಗಳನ್ನು ಆಯ್ಕೆಮಾಡಿ ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಆಯ್ಕೆ ಪ್ರಾಧಿಕಾರಿಯಾದ ವಿಭಾಗೀಯ ಸಹ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು ವಿಭಾಗ, ಮೈಸೂರು ಇವರ ಕಚೇರಿ ಮತ್ತು ಈ ವಿಭಾಗದ ಎಲ್ಲಾ ಜಿಲ್ಲಾ ಉಪನಿರ್ದೇಶಕರು (ಆಡಳಿತ) ರವರ ಕಚೇರಿಗಳಲ್ಲಿ ಪ್ರಕಟಿಸಲಾಗುವುದು ಹಾಗೂ ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಿಸಿರುವ ಬಗ್ಗೆ ರಾಜ್ಯ ಮಟ್ಟದ ಎರಡು ದಿನಪತ್ರಿಕೆಗಳಲ್ಲಿ ಸಂಕ್ಷಿಪ್ತ ಸೂಚನೆಯನ್ನು ಪ್ರಕಟಿಸಲಾಗುವುದು. ಅಭ್ಯರ್ಥಿಗಳು ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪರಿಶೀಲಿಸಿ ತಮ್ಮ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಮುಂದೆ ತಿಳಿಸುವ ನಿಗದಿತ ದಿನಾಂಕದೊಳಗೆ ಆಕ್ಷೇಪಣೆಗಳನ್ನು ಸಲ್ಲಿಸಬಹುದಾಗಿದೆ. ಈ ದಿನಾಂಕದ ನಂತರ ಸಲ್ಲಿಸುವ ಯಾವುದೇ ಆಕ್ಷೇಪಣೆಗಳನ್ನು ಪರಿಗಣಿಸದೆ ತಿರಸ್ಕರಿಸಲಾಗುವುದು. ನಿಗದಿತ ಸಮಯದೊಳಗೆ ಆಕ್ಷೇಪಣೆಗಳನ್ನು ಸಲ್ಲಿಸದೆ ಇರುವ ಅಭ್ಯರ್ಥಿಗಳು ಅಂತಿಮ ಆಯ್ಕೆ ಪಟ್ಟಿ ಪ್ರಕಟವಾದ ನಂತರ ಯಾವುದೇ ರೀತಿಯ ಪರಿಹಾರಕ್ಕೆ ಅರ್ಹರಾಗುವುದಿಲ್ಲ. ಮತ್ತು ಈ ಬಗ್ಗೆ ವೈಯಕ್ತಿಕವಾಗಿ ಯಾವುದೇ ಅಭ್ಯರ್ಥಿಗೂ ಸೂಚನೆ ನೀಡಲಾಗುವುದಿಲ್ಲ.

**ವಿಶೇಷ ಸೂಚನೆಗಳು:–**

**<u>ತಾತ್ಕಾಲಿಕ ಆಯ್ಕೆಪಟ್ಟಿ ಪ್ರಕಟಿಸಿದ ನಂತರ ಅಭ್ಯರ್ಥಿಗಳು ಆಕ್ಷೇಪಣೆ ಸಲ್ಲಿಸುವಾಗ ಮೂಲ ಅರ್ಜಿಯಲ್ಲಿ ದಾಖಲಿಸಿದ ವಿಷಯಗಳಿಗೆ ಸಂಬಂಧಿಸಿದಂತೆ ಮಾತ್ರ ಆಕ್ಷೇಪಣೆ ಸಲ್ಲಿಸಬಹುದು. (ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ) ನಮೂದಿಸಲು ಬಿಟ್ಟು ಹೋಗಿದ್ದ / ಮರೆತು ಹೋಗಿದ್ದ ಯಾವುದೇ ಮಾಹಿತಿಗಳನ್ನು ಅಂದರೆ ಅಂಕಗಳ ವಿವರ, ಮೀಸಲಾತಿ ಪ್ರವರ್ಗ / ಗೌರವ ಶಿಕ್ಷಕರಾಗಿ / ಅರೆಕಾಲಿಕ ಶಿಕ್ಷಕರಾಗಿ / ಜನಗಣಗತಿ ಸಂಸ್ಥೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಸೇವೆ ಸಲ್ಲಿಸಿದ ವರ್ಷಗಳ ಬಗ್ಗೆ ಮಾಹಿತಿಗಳು ಇತ್ಯಾದಿ ಆಯ್ಕೆಗೆ ಸಂಬಂಧಿಸಿದ ಮಾಹಿತಿಗಳನ್ನು ಹಾಗೂ ಹೊಸದಾಗಿ ದಾಖಲಿಸಲು ಬಯಸುವ ಯಾವುದೇ ಮಾಹಿತಿಗಳನ್ನು ಸಲ್ಲಿಸಲು ಅವಕಾಶವಿರುವುದಿಲ್ಲ. ಅಂತಹ ಆಕ್ಷೇಪಣೆ ಮತ್ತು ಲಗತ್ತುಗಳನ್ನು ಪರಿಗಣಿಸದೆ ತಿರಸ್ಕರಿಸಲಾಗುವುದು.</u>**

**25. ಅಂತಿಮ ಆಯ್ಕೆ ಪಟ್ಟಿ:–**

1) ತಾತ್ಕಾಲಿಕ ಆಯ್ಕೆಪಟ್ಟಿಯಲ್ಲಿ ಆಯ್ಕೆ ಹೊಂದಿರುವ ಎಲ್ಲಾ ಅಭ್ಯರ್ಥಿಗಳ ಮೂಲ ಅಂಕಪಟ್ಟಿ ಮತ್ತು ಪ್ರಮಾಣ ಪತ್ರಗಳನ್ನು ಪರಿಶೀಲಿಸಿ ದೃಢಪಡಿಸಿಕೊಂಡ ನಂತರ ಅಂತಿಮ ಆಯ್ಕೆಪಟ್ಟಿಯನ್ನು ಪ್ರಕಟಿಸಲಾಗುವುದು. ಮೂಲ ಪ್ರಮಾಣ ಪತ್ರಗಳನ್ನು ಪರಿಶೀಲನೆಗೆ ಸಲ್ಲಿಸದೇ ಇರುವ ಅಭ್ಯರ್ಥಿಗಳು ಅಂತಿಮ ಆಯ್ಕೆಪಟ್ಟಿಯಲ್ಲಿ ಪರಿಗಣನೆಗೆ ಬರುವುದಿಲ್ಲ.

2) ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸುವ ಸಂದರ್ಭದಲ್ಲಿ ಅಭ್ಯರ್ಥಿಗಳು ಅರ್ಜಿಯಲ್ಲಿ ನಮೂದಿಸಿರುವ ಜಿಲ್ಲಾ ಆದ್ಯತೆಯನ್ನು ಆಧಾರವಾಗಿಟ್ಟುಕೊಂಡು ಮೆರಿಟ್ ಮತ್ತು ಮೀಸಲಾತಿ ಆಧರಿಸಿ ನಿಯಮಾನುಸಾರ ಜಿಲ್ಲೆಗಳನ್ನು ಹಂಚಿಕೆ ಮಾಡಲಾಗುತ್ತದೆ.

3) ಜಿಲ್ಲಾ ಮಟ್ಟದ ಆಯ್ಕೆ ಪಟ್ಟಿಯಲ್ಲಿ ಆಯ್ಕೆಯಾದ ಅರ್ಹ ಅಭ್ಯರ್ಥಿಗಳ ಅರ್ಹತೆ ಮತ್ತು ಮೀಸಲಾತಿಗಳನ್ನುನಮ ಖಚಿತಪಡಿಸಿಕೊಂಡು ನೇಮಕಾತಿ ಪ್ರಾಧಿಕಾರಿಯಾದ ಸಂಬಂಧಿಸಿದ ಜಿಲ್ಲಾ ಉಪನಿರ್ದೇಶಕರು (ಆಡಳಿತ) ರವರು ನೇಮಕಾತಿ ಆದೇಶವನ್ನು ಕೌನ್ಸಿಲಿಂಗ್ ಮೂಲಕ ನೀಡುತ್ತಾರೆ.

4) ಆರ್.ಎಂ.ಎಸ್.ಎ ವತಿಯಿಂದ ಉನ್ನತೀಕರಿಸಿದ ಪ್ರೌಢಶಾಲೆಗಳು ಮತ್ತು ಆದರ್ಶ ವಿದ್ಯಾಲಯಗಳಿಗೆ ತೈನಾತಿಸಲ್ಪಟ್ಟ ಶಿಕ್ಷಕರು ಆ ಯೋಜನೆ ಇರುವರೆಗೆ ಅಥವಾ ಆ ಹುದ್ದೆಗಳು ಯೋಜನೇತರ ಹುದ್ದೆಗಳಾಗಿ ಪರಿವರ್ತನೆಯಾಗುವವರೆಗೆ ಯಾವುದು ಮೊದಲೋ ಅಲ್ಲಿಯವರೆಗೆ ಅವರ ವರ್ಗಾವಣೆಯು ಆ ಶಾಲಾ ಘಟಕಗಳಲ್ಲಿ ಆಗುತ್ತದೆ.

5) **ಅಂತಿಮ ಆಯ್ಕೆಪಟ್ಟಿ ತಯಾರಿಸುವಾಗ** ಮಹಿಳೆಯರಿಗೆ ಮೀಸಲಿರಿಸಿದ ರಿಕ್ತ ಸ್ಥಾನಗಳಿಗೆ ಅರ್ಹ ಮಹಿಳಾ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಆಯಾ ವರ್ಗಕ್ಕೆ ಸೇರಿದ ಪುರುಷ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.ಮಾಜಿ ಸೈನಿಕರಿಗಾಗಿ ಮೀಸಲಿರಿಸಿದ ರಿಕ್ತ ಸ್ಥಾನಗಳಿಗೆ ಅರ್ಹ ಮಾಜಿ ಸೈನಿಕ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಅಯಾ ವರ್ಗಕ್ಕೆ ಸೇರಿದ ಇತರೆ ಅರ್ಹ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.ಇದೇ ರೀತಿ ಯೋಜನಾ ನಿರಾಶ್ರಿತ / ಗ್ರಾಮೀಣ ಅರ್ಹ ಅಭ್ಯರ್ಥಿಗಳು ದೊರಯದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಆಯಾ ಪ್ರವರ್ಗಕ್ಕೆ ಸೇರಿದ ಇತರೆ ಅರ್ಹ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.ಅರ್ಹ ಅಂಗವಿಕಲ ಅಭ್ಯರ್ಥಿಗಳು ದೊರೆಯದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಭರ್ತಿ ಮಾಡದೆ ಬ್ಯಾಕ್‌ಲಾಗ್ ಹುದ್ದೆಗಳೆಂದು ಪರಿಗಣಿಸಲಾಗುವುದು.

**26. ನಿಬಂಧನೆಗಳು:–**

1) ಅಭ್ಯರ್ಥಿಯು ಆನ್ ಲೈನ್ ಮೂಲಕ ಸಲ್ಲಿಸಲ್ಪಟ್ಟ ಮೂಲ ಅರ್ಜಿಯಲ್ಲಿ ನೀಡಿರುವ ಮಾಹಿತಿಗಳ ಬದಲಾವಣೆಗೆ ಯಾವುದೇ ಹಂತದಲ್ಲೂ ಅವಕಾಶವಿರುವುದಿಲ್ಲ. ಆದುದರಿಂದ ಅಭ್ಯರ್ಥಿಯು ಅರ್ಜಿ ಸಲ್ಲಿಸುವ ಸಂದರ್ಭದಲ್ಲಿ ಅರ್ಹತೆ, ಮೀಸಲಾತಿ ಹಾಗೂ ಇತರೆ ವಿವರಗಳ ಬಗ್ಗೆ ಖಾತ್ರಿ ಪಡಿಸಿಕೊಂಡು ವಿವರಗಳನ್ನು ದಾಖಲಿಸುವುದು ಅಭ್ಯರ್ಥಿಗಳ ವೈಯಕ್ತಿಕ ಜವಾಬ್ದಾರಿಯಾಗಿರುತ್ತದೆ.

2) ಅಭ್ಯರ್ಥಿಯು ಕೋರುವ ಮೀಸಲಾತಿ ಮತ್ತು ಇತರೆ ಯಾವುದೇ ಸೌಲಭ್ಯಗಳಿಗೆ ಸಂಬಂಧಿಸಿದಂತೆ ಎಲ್ಲಾ ಪ್ರಮಾಣ ಪತ್ರಗಳ ದೃಢೀಕೃತ ಪ್ರತಿಗಳನ್ನು ಅರ್ಜಿ ಸಲ್ಲಿಸಲು ನಿಗಧಿ ಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು. ಸದರಿ ಮೂಲ ಪ್ರಮಾಣ ಪತ್ರಗಳನ್ನು ಆಯ್ಕೆ ಪ್ರಾಧಿಕಾರ/ನೇಮಕಾತಿ ಪ್ರಾಧಿಕಾರ ಸೂಚಿಸಿದ ದಿನದಂದು ಪರಿಶೀಲನೆಗೆ ಹಾಜರುಪಡಿಸಬೇಕು. ಒಂದು ವೇಳೆ ಯಾವುದೇ ಪ್ರಮಾಣ ಪತ್ರಗಳನ್ನು ಹಾಜರು ಪಡಿಸಲು ವಿಫಲರಾದಲ್ಲಿ ಅಂತಹ ಮೀಸಲಾತಿಯನ್ನು ರದ್ದುಪಡಿಸಲಾಗುವುದು.

3) ಅಭ್ಯರ್ಥಿಯು ಅರ್ಜಿ ಸಲ್ಲಿಸುವ ಸಮಯದಲ್ಲಿ ಯಾವುದೇ ಸರ್ಕಾರಿ ಇಲಾಖೆಯಲ್ಲಿ ಖಾಯಂ ಅಥವಾ ಹಂಗಾಮಿಯಾಗಿ ನೌಕರಿಯಲ್ಲಿದ್ದರೆ ಅವನು / ಅವಳು ತಾನು ಸೇವೆ ಸಲ್ಲಿಸುತ್ತಿರುವ ಹುದ್ದೆಯ ನೇಮಕಾತಿ ಪ್ರಾಧಿಕಾರಿಯವರ ಸಮ್ಮತಿಯಿಲ್ಲದೆ ಅರ್ಜಿಯನ್ನು ಸಲ್ಲಿಸಿದ್ದರೆ, ಅಂತಹ ಅಭ್ಯರ್ಥಿ ನೇಮಕಾತಿಗೆ ಅರ್ಹರಾಗುವುದಿಲ್ಲ. ಆದುದರಿಂದ ಸೇವೆಯಲ್ಲಿರುವ ಅಭ್ಯರ್ಥಿಗಳು ಸೇವೆಯಲ್ಲಿರುವ ಬಗ್ಗೆ ಸೇವಾ ಪ್ರಮಾಣ ಪತ್ರ ಮತ್ತು ಸದರಿ ಪ್ರಸ್ತುತ ಹುದ್ದೆಗೆ ಅರ್ಜಿ ಸಲ್ಲಿಸುವ ಬಗ್ಗೆ ಸಂಬಂಧಿಸಿದ ನೇಮಕಾತಿ ಪ್ರಾಧಿಕಾರದಿಂದ ನಿರಾಕ್ಷೇಪಣಾ ಪ್ರಮಾಣ ಪತ್ರವನ್ನು (No objection certificate) ಪಡೆದಿಟ್ಟುಕೊಂಡಿರಬೇಕು.

4) ಅರ್ಜಿ ನಮೂನೆ, ಉತ್ತರ ಪತ್ರಿಕೆ, ಪ್ರವೇಶ ಪತ್ರಗಳ ನಿಗದಿತ ಸ್ಥಳಗಳಲ್ಲಿ ಎಡಗೈ ಹೆಬ್ಬೆಟ್ಟು ಗುರುತನ್ನು ಸ್ಪಷ್ಟವಾಗಿ ಹಾಕಬೇಕು. ಎಡಗೈ ಹೆಬ್ಬೆರಳ ಗುರುತು ರಹಿತ ಅರ್ಜಿಯನ್ನು ಯಾವುದೇ ಸೂಚನೆ ನೀಡದೆ ತಿರಸ್ಕರಿಸಲಾಗುವುದು.

5) ಅಭ್ಯರ್ಥಿಗಳು ಆನ್ ಲೈನ್ ಮೂಲಕ ಅರ್ಜಿ ಸಲ್ಲಿಸಿದ ನಂತರ ಪ್ರವೇಶ ಪತ್ರದ ಪ್ರತಿಯನ್ನು ದ್ವಿಪ್ರತಿಯಲ್ಲಿ ಡೌನ್ ಲೋಡ್ ಮಾಡಿಕೊಂಡು ಆ ಪ್ರತಿಗಳಲ್ಲಿ ಒಂದೇ ಮಾದರಿಯ ಇತ್ತೀಚಿನ ತಲಾ ಒಂದು ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಅಂಟಿಸಬೇಕು.

**27. ನ್ಯಾಯಾಲಯ ವ್ಯಾಪ್ತಿ:**

ಮೈಸೂರು ವಿಭಾಗದ ಶಿಕ್ಷಕರ ನೇಮಕಾತಿಗಳಿಗೆ ಸಂಬಂಧಿಸಿದಂತೆ, ನ್ಯಾಯಾಲಯದ ಪ್ರಕರಣ ದಾಖಲಾದಲ್ಲಿ ನೇಮಕಾತಿ ಪ್ರಾಧಿಕಾರವಾದ ಸಂಬಂಧಿಸಿದ ಉಪನಿರ್ದೇಶಕರು(ಆಡಳಿತ) ಆಯ್ಕೆ ಪ್ರಾಧಿಕಾರವಾದ ವಿಭಾಗೀಯ ಸಹ ನಿರ್ದೇಶಕರು, ಮೈಸೂರು ವಿಭಾಗ, ಮೈಸೂರು, ನಿರ್ದೇಶಕರು (ಪ್ರೌಢ ಶಿಕ್ಷಣ), ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಪ್ರತಿಸ್ಪಂದಿಸುವ ಅಧಿಕಾರಿಗಳಾಗಿರುತ್ತಾರೆ.

**28. ಸೂಚನೆಗಳು:**

**ಯಾವುದೇ ವ್ಯಕ್ತಿಯು ಸರ್ಕಾರಿ ನೇಮಕಾತಿಗೆ ಈ ಕೆಳಕಂಡ ಸಂದರ್ಭದಲ್ಲಿ ಅರ್ಹನಾಗುವುದಿಲ್ಲ:**

ಅ) ಯಾವುದೇ ನಿಷೇಧಿತ ಸಂಘ ಸಂಸ್ಥೆಯ ಸದಸ್ಯನಾಗಿರುವಲ್ಲಿ ಅಥವಾ ಸದಸ್ಯರಾಗಿದ್ದಲ್ಲಿ ಅಥವಾ ಯಾವುದೇ ನಿಷೇಧಿತ ಸಂಸ್ಥೆಯ ಕಾರ್ಯ ಚಟುವಟಿಕೆಯಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದಲ್ಲಿ.

ಆ) ಭಾರತ ಸಂವಿಧಾನಕ್ಕೆ ಚ್ಯುತಿ ತರುವ ಕಾರ್ಯದಲ್ಲಿ ಪ್ರವೃತ್ತನಾದಲ್ಲಿ.

ಇ) ಕಾನೂನು ಭಂಗ ಮಾಡಿ ಹಿಂಸಾಕೃತ್ಯದಲ್ಲಿ ತೊಡಗಿದವರಾಗಿದ್ದರೆ.

ಈ) ಭಾರತ ದೇಶದ ಸಾರ್ವಭೌಮತೆ ಹಾಗೂ ಸುಭದ್ರತೆಗೆ ಧಕ್ಕೆ ತರುವ ಕಾರ್ಯದಲ್ಲಿ ಪ್ರವೃತ್ತರಾಗಿದ್ದರೆ.

ಉ) ಭಾರತ ಸರ್ಕಾರದ ಅಥವಾ ಯಾವುದೇ ರಾಜ್ಯ ಸರ್ಕಾರದ ಸೇವೆಯಿಂದ ಉಚ್ಚಾಟನೆಗೊಂಡ ಪ್ರಸಂಗಗಳಲ್ಲಿ.

ಊ) ನ್ಯಾಯಬಾಹಿರ ಕೃತ್ಯಗಳಲ್ಲಿ ತೊಡಗಿ ಅಪರಾಧಕ್ಕೆ ಒಳಗಾದ ಪ್ರಸಂಗಗಳಲ್ಲಿ.

ಋ) ಋ) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿಯು ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿಯಿರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯುಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೆ ನೇಮಕಾತಿಗೆ ಅರ್ಹರಾಗುವುದಿಲ್ಲ.

ಎ) ಅಭ್ಯರ್ಥಿಯು ಮತ್ತೊಬ್ಬ ವ್ಯಕ್ತಿಯಂತೆ ನಟಿಸಿ ವಂಚಿಸಿದ ಅಥವಾ ದಾಖಲೆಗಳನ್ನು ತಿದ್ದಿದ ಅಥವಾ ಸೃಷ್ಟಿಸಿದ ಅಥವಾ ಸರಿಯಿಲ್ಲದ ಅಥವಾ ಸುಳ್ಳು ಅಥವಾ ದೋಷಪೂರ್ಣ ವಿವರಗಳನ್ನು ನೀಡುವ ಅಥವಾ ನೇಮಕಾತಿಗಾಗಿ ನಡೆಸುವ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಅನುಚಿತ ರೀತಿಯಲ್ಲಿ ವರ್ತಿಸುವ ಅಥವಾ ವರ್ತಿಸಲು ಪ್ರಯತ್ನಿಸಿದ ಅಥವಾ ಅವನ / ಅವಳ ನೇಮಕಾತಿಗಾಗಿ ಸಂಬಂಧಿಸಿದಂತೆ ಯಾವುದೇ ಇತರ ಅಕ್ರಮ ಅನುಚಿತ ವಿಧಾನಗಳನ್ನು ಅನುಸರಿಸಿದ ಕಾರಣದಿಂದಾಗಿ ತಪ್ಪಿತಸ್ಥನೆಂದು ಕಂಡು ಬಂದಲ್ಲಿ ಅವನ / ಅವಳ ಅಭ್ಯರ್ಥಿ ತನವನ್ನು ಯಾವುದೇ ಸೂಚನೆ ನೀಡದೆ ರದ್ದುಗೊಳಿಸಲಾಗುವುದು ಮತ್ತು ಅಂತಹವರನ್ನು ಕ್ರಿಮಿನಲ್ ಪ್ರಾಸಿಕ್ಯೂಷನ್‌ಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡಿಸಲಾಗುವುದು.

ಏ) ಆಯ್ಕೆ ಪ್ರಾಧಿಕಾರಿಯು ನಡೆಸುವ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಮತ್ತು ಅರ್ಹತಾ ಪರೀಕ್ಷೆಗಳಲ್ಲಿ ಪಡೆದಿರುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಿದ ಆಯ್ಕೆಪಟ್ಟಿಯಲ್ಲಿ ಅವನ / ಅವಳ ಆಯ್ಕೆಯು ಖಾಯಂ ಆಗದ ಹೊರತು ನೇಮಕಾತಿಗಾಗಿ ಹಕ್ಕನ್ನು ಪಡೆದುಕೊಳ್ಳುವುದಿಲ್ಲ.

ಐ) ಈ ನೇಮಕಾತಿಯು, ಮತ್ತು ಈ ಅಧಿಸೂಚನೆಯಲ್ಲಿ ತಿಳಿಸಿರುವ ಆದೇಶಗಳು, ಜ್ಞಾಪನಗಳು, ಸುತ್ತೋಲೆಗಳು ಕಾಲದಿಂದ ಕಾಲಕ್ಕೆ ಹೊರಡಿಸಿರುವ ಆದೇಶಗಳು ಮತ್ತು ತಿದ್ದುಪಡಿಗೆ ಒಳಪಟ್ಟಿರುತ್ತದೆ.

ಒ) ಆಯ್ಕೆ ಮತ್ತು ನೇಮಕಾತಿ ಪ್ರಕ್ರಿಯೆಯ ಯಾವುದೇ ಹಂತದಲ್ಲಿ ಆಯ್ಕೆಗೆ ಪರಿಗಣಿಸಿರುವ ಅಂಶಗಳ ಬಗ್ಗೆ ವ್ಯತ್ಯಾಸ ಕಂಡು ಬಂದಲ್ಲಿ ಅಥವಾ ಆಕ್ಷೇಪಣೆ ಸಲ್ಲಿಕೆಯಾದಲ್ಲಿ, ಕೋರ್ಟಿನ ತೀರ್ಮಗಳು, ಇಲಾಖೆ ಸುತ್ತೋಲೆಗಳು, ಸರ್ಕಾರದ ನಿರ್ದೇಶನಗಳು ಬಂದಲ್ಲಿ ಪ್ರಕಟಿಸಿರುವ ಪಟ್ಟಿಗಳಲ್ಲಿ ಸೂಕ್ತ ಬದಲಾವಣೆ ಮಾಡಿ ಆಯ್ಕೆ ಪಟ್ಟಿ ಪರಿಷ್ಕರಿಸುವ ಅಧಿಕಾರವನ್ನು ಆಯ್ಕೆ ಪ್ರಾಧಿಕಾರ ಹೊಂದಿರುತ್ತದೆ.

ಓ) **ನೇಮಕಾತಿ ಪ್ರಕ್ರಿಯೆ ಪೂರ್ಣಗೊಳ್ಳುವವರೆಗೆ ಈ ಸಂಬಂಧ ಆಯ್ಕೆ ಪ್ರಾಧಿಕಾರಿ/ನೇಮಕಾತಿ ಪ್ರಾಧಿಕಾರಿಗಳು ನೀಡುವ ಸೂಚನೆಗಳನ್ನು ಇಲಾಖೆಯ ಅಧಿಕೃತ ವೆಬ್‌ಸೈಟ್‌ನಲ್ಲಿ (www.schooleducation.kar.nic.in) ಅವಲೋಕಿಸುವುದು.**

**(ಸಿ.ಚಾಮೇಗೌಡ)**

ಆಯ್ಕೆ ಪ್ರಾಧಿಕಾರಿ ಹಾಗೂ ಸಹನಿರ್ದೇಶಕರು,

ಸಾರ್ವಜನಿಕ ಶಿಕ್ಷಣ ಇಲಾಖೆ,

ಮೈಸೂರು ವಿಭಾಗ, ಮೈಸೂರು.

***ಸಾರ್ವಜನಿಕ ಶಿಕ್ಷಣ ಇಲಾಖೆ***

**ಆಯ್ಕೆ ಪ್ರಾಧಿಕಾರಿಗಳು ಹಾಗೂ ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು ವಿಭಾಗ, ಮೈಸೂರು.**

ಸಂಖ್ಯೆ: ಜಿ12/ಪ್ರೌ.ಶಾ.ಶಿ.ನೇ.01/2014–15 ಆರ್.ಎಂ.ಎಸ್.ಎ. (ಕೇಂದ್ರ ವಲಯ) ದಿನಾಂಕ: 23–03–2015

| **ಕ್ರ.ಸಂ** | **ಜಿಲ್ಲೆಯ ಹೆಸರು** | **ಭಾಷೆಗಳು** | | | | | | | **ಕಲಾ** | | | | | **ಪಿಸಿಎಂ** | | | | | **ಸಿಬಿಜಡ್** | | | | | ದೈ.ಶಿ.ಶಿ. ಗ್ರೇ–1 | **ಒಟ್ಟು** |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | ಕನ್ನಡ | ಆಂಗ್ಲ | ಹಿಂದಿ | ಉರ್ದು | ತೆಲುಗು | ತಮಿಳು | ಸಂಸ್ಕೃತ | ಕನ್ನಡ | ಉರ್ದು | ತೆಲುಗು | ತಮಿಳ | ಆಂಗ್ಲ | ಕನ್ನಡ | ಟಿಜಿಟಿ ಉರ್ದು | ತೆಲುಗು | ತಮಿಳು | ಆಂಗ್ಲ | ಕನ್ನಡ | ಉರ್ದು | ತೆಲುಗು | ತಮಿಳು | ಆಂಗ್ಲ | | |
| **1** | **ಮೈಸೂರು** | | | | | | | | | | | | | | | | | | | | | | | | |
| **2** | **ಚಾಮರಾಜನಗರ** | | | | | | | | | | | | | | | | | | | | | | | | |
| **3** | **ಮಂಡ್ಯ** | | | | | | | | | | | | | | | | | | | | | | | | |
| **4** | **ಹಾಸನ** | | | | | | | | | | | | | | | | | | | | | | | | |
| **5** | **ಚಿಕ್ಕಮಗಳೂರು** | | | | | | | | | | | | | | | | | | | | | | | | |
| **6** | **ದಕ್ಷಿಣ ಕನ್ನಡ** | 5 | 5 | | | | | | 5 | | | | | 5 | | | | | 5 | | | | | | **25** |
| **7** | **ಉಡುಪಿ** | | | | | | | | | | | | | | | | | | | | | | | | |
| **8** | **ಕೊಡಗು** | | | | | | | | | | | | | | | | | | | | | | | | |
| | **ಒಟ್ಟು** | **5** | **5** | | | | | | **5** | | | | | **5** | | | | | **5** | | | | | | **25** |

**(ಸಿ.ಚಾಮೇಗೌಡ)**

ಆಯ್ಕೆ ಪ್ರಾಧಿಕಾರಿ ಹಾಗೂ ಸಹನಿರ್ದೇಶಕರು,

ಸಾರ್ವಜನಿಕ ಶಿಕ್ಷಣ ಇಲಾಖೆ,

ಮೈಸೂರು ವಿಭಾಗ, ಮೈಸೂರು.

***ಸಾರ್ವಜನಿಕ ಶಿಕ್ಷಣ ಇಲಾಖೆ***

**ಆಯ್ಕೆ ಪ್ರಾಧಿಕಾರಿಗಳು ಹಾಗೂ ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು ವಿಭಾಗ, ಮೈಸೂರು.**

ಸಂಖ್ಯೆ: ಜಿ12/ಪ್ರೌ.ಶಾ.ಶಿ.ನೇ.01/2014–15 ಆದರ್ಶ ವಿದ್ಯಾಲಯ (ಕೇಂದ್ರ ವಲಯ) ದಿನಾಂಕ: 23–03–2015

| ಕ್ರ.ಸಂ | ಜಿಲ್ಲೆಯ ಹೆಸರು | ಭಾಷೆಗಳು | | | | | | | ಕಲಾ | | | | | ಪಿಸಿಎಂ | | | | | ಸಿಬಿಜಡ್ | | | | | ದೈ.ಶಿ.ಶಿ. ಗ್ರೇ–1 | ಒಟ್ಟು |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | ಕನ್ನಡ | ಆಂಗ್ಲ | ಹಿಂದಿ | ಉರ್ದು | ತೆಲುಗು | ತಮಿಳು | ಸಂಸ್ಕೃತ | ಕನ್ನಡ | ಉರ್ದು | ತೆಲುಗು | ತಮಿಳು | ಆಂಗ್ಲ | ಕನ್ನಡ | ಮರಾಠಿ ಉರ್ದು | ತೆಲುಗು | ತಮಿಳು | ಆಂಗ್ಲ | ಕನ್ನಡ | ಉರ್ದು | ತೆಲುಗು | ತಮಿಳು | ಆಂಗ್ಲ | | |
| 1 | ಮೈಸೂರು | 6 | 6 | 6 | | | | | | | | | 6 | | | | | 12 | | | | | | | **36** |
| 2 | ಚಾಮರಾಜನಗರ | 4 | 4 | 4 | | | | | | | | | 4 | | | | | 8 | | | | | | | **24** |
| 3 | ಮಂಡ್ಯ | 2 | 2 | 2 | | | | | | | | | 2 | | | | | 4 | | | | | | | **12** |
| 4 | ಹಾಸನ | 1 | 1 | 1 | | | | | | | | | 1 | | | | | 2 | | | | | | | **06** |
| 5 | ಚಿಕ್ಕಮಗಳೂರು | | | | | | | | | | | | | | | | | | | | | | | | |
| 6 | ದಕ್ಷಿಣ ಕನ್ನಡ | | | | | | | | | | | | | | | | | | | | | | | | |
| 7 | ಉಡುಪಿ | | | | | | | | | | | | | | | | | | | | | | | | |
| 8 | ಕೊಡಗು | | | | | | | | | | | | | | | | | | | | | | | | |
| | **ಒಟ್ಟು** | **13** | **13** | **13** | | | | | | | | | **13** | | | | | **26** | | | | | | | **78** |

**(ಸಿ.ಚಾಮೇಗೌಡ)**

ಆಯ್ಕೆ ಪ್ರಾಧಿಕಾರಿ ಹಾಗೂ ಸಹನಿರ್ದೇಶಕರು,

ಸಾರ್ವಜನಿಕ ಶಿಕ್ಷಣ ಇಲಾಖೆ,

ಮೈಸೂರು ವಿಭಾಗ, ಮೈಸೂರು.

***ಸಾರ್ವಜನಿಕ ಶಿಕ್ಷಣ ಇಲಾಖೆ***

**ಆಯ್ಕೆ ಪ್ರಾಧಿಕಾರಿಗಳು ಹಾಗೂ ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು ವಿಭಾಗ, ಮೈಸೂರು.**

ಸಂಖ್ಯೆ: ಜಿ12/ಪ್ರೌ.ಶಾ.ಶಿ.ನೇ.01/2014–15 ರಾಜ್ಯ ವಲಯ ದಿನಾಂಕ: 23–03–2015

| ಕ್ರ.ಸಂ | ಜಿಲ್ಲೆಯ ಹೆಸರು | ಭಾಷೆಗಳು | | | | | | | ಕಲಾ | | | | | ಪಿಸಿಎಂ | | | | | ಸಿಬಿಜಡ್ | | | | | ದೈ.ಶಿ.ಶಿ. ಗ್ರೇ–1 | ಒಟ್ಟು |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | ಕನ್ನಡ | ಆಂಗ್ಲ | ಹಿಂದಿ | ಉರ್ದು | ತೆಲುಗು | ತಮಿಳು | ಸಂಸ್ಕೃತ | ಕನ್ನಡ | ಉರ್ದು | ತೆಲುಗು | ತಮಿಳು | ಆಂಗ್ಲ | ಕನ್ನಡ | ಟಿಜಿಟಿ ಉರ್ದು | ತೆಲುಗು | ತಮಿಳು | ಆಂಗ್ಲ | ಕನ್ನಡ | ಉರ್ದು | ತೆಲುಗು | ತಮಿಳು | ಆಂಗ್ಲ | | |
| 1 | ಮೈಸೂರು | 12 | 12 | 05 | 01 | | | | 16 | | | | | 8 | | | | | 10 | | | | | 2 | **66** |
| 2 | ಚಾಮರಾಜನಗರ | 05 | 15 | 04 | 01 | | | | 03 | | | | | 08 | | | | | 07 | | | | | 03 | **46** |
| 3 | ಮಂಡ್ಯ | 06 | 03 | 02 | 03 | | | | 06 | | | | | 06 | | | | | 08 | | | | | 06 | **40** |
| 4 | ಹಾಸನ | 06 | 08 | | | | | | 09 | | | | | 04 | | | | | 05 | | | | | 15 | **47** |
| 5 | ಚಿಕ್ಕಮಗಳೂರು | 03 | 03 | | | | | 01 | 04 | | | | | | | | | | 01 | | | | | 02 | **14** |
| 6 | ದಕ್ಷಿಣ ಕನ್ನಡ | 03 | 04 | 01 | | | | | 02 | | | | | 04 | | | | | 03 | | | | | 0 | **17** |
| 7 | ಉಡುಪಿ | 01 | 02 | 03 | | | | | 08 | | | | | 01 | | | | | 01 | | | | | 0 | **16** |
| 8 | ಕೊಡಗು | 02 | | 02 | | | | | 02 | | | | | 03 | | | | | 01 | | | | | 02 | **12** |
| | **ಒಟ್ಟು** | **38** | **47** | **17** | **05** | | | **01** | **50** | | | | | **34** | | | | | **36** | | | | | **30** | **258** |

**(ಸಿ.ಚಾಮೇಗೌಡ)**

ಆಯ್ಕೆ ಪ್ರಾಧಿಕಾರಿ ಹಾಗೂ ಸಹನಿರ್ದೇಶಕರು,

ಸಾರ್ವಜನಿಕ ಶಿಕ್ಷಣ ಇಲಾಖೆ,

ಮೈಸೂರು ವಿಭಾಗ, ಮೈಸೂರು.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



***ಸಾರ್ವಜನಿಕ ಶಿಕ್ಷಣ ಇಲಾಖೆ***

**ಆಯ್ಕೆ ಪ್ರಾಧಿಕಾರಿಗಳು ಹಾಗೂ ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು ವಿಭಾಗ, ಮೈಸೂರು.**

ಸಂಖ್ಯೆ: ಜಿ12/ಪ್ರೌ.ಶಾ.ಶಿ.ನೇ.01/2014–15 ರಾಜ್ಯ ವಲಯ ದಿನಾಂಕ: 23–03–2015

| ಕ್ರ.ಸಂ | ಜಿಲ್ಲೆಯ ಹೆಸರು | ಭಾಷೆಗಳು | | | | | | | ಕಲಾ | | | | | ಪಿಸಿಎಂ | | | | | ಸಿಬಿಜಡ್ | | | | | ದೈ.ಶಿ.ಶಿ. ಗ್ರೇ–1 | ಒಟ್ಟು |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | ಕನ್ನಡ | ಆಂಗ್ಲ | ಹಿಂದಿ | ಉರ್ದು | ತೆಲುಗು | ತಮಿಳು | ಸಂಸ್ಕೃತ | ಕನ್ನಡ | ಉರ್ದು | ತೆಲುಗು | ತಮಿಳು | ಆಂಗ್ಲ | ಕನ್ನಡ | ಉರ್ದು | ತೆಲುಗು | ತಮಿಳು | ಆಂಗ್ಲ | ಕನ್ನಡ | ಉರ್ದು | ತೆಲುಗು | ತಮಿಳು | ಆಂಗ್ಲ | | |
| 1 | **ಮೈಸೂರು** | 18 | 18 | 11 | 01 | | | | 16 | | | | 06 | 8 | | | | 12 | 10 | | | | | 2 | **102** |
| 2 | **ಚಾಮರಾಜನಗರ** | 09 | 19 | 08 | 01 | | | | 03 | | | | 04 | 08 | | | | 08 | 07 | | | | | 03 | **70** |
| 3 | **ಮಂಡ್ಯ** | 08 | 05 | 04 | 03 | | | | 06 | | | | 02 | 06 | | | | 04 | 08 | | | | | 06 | **52** |
| 4 | **ಹಾಸನ** | 07 | 09 | 01 | | | | | 09 | | | | 01 | 04 | | | | 02 | 05 | | | | | 15 | **53** |
| 5 | **ಚಿಕ್ಕಮಗಳೂರು** | 03 | 03 | | | | | 01 | 04 | | | | | | | | | | 01 | | | | | 02 | **14** |
| 6 | **ದಕ್ಷಿಣ ಕನ್ನಡ** | 08 | 09 | 01 | | | | | 07 | | | | | 09 | | | | | 08 | | | | | 0 | **42** |
| 7 | **ಉಡುಪಿ** | 01 | 02 | 03 | | | | | 08 | | | | | 01 | | | | | 01 | | | | | 0 | **16** |
| 8 | **ಕೊಡಗು** | 02 | | 02 | | | | | 02 | | | | | 03 | | | | | 01 | | | | | 02 | **12** |
| | **ಒಟ್ಟು** | **56** | **65** | **30** | **05** | | | **01** | **55** | | | | **13** | **39** | | | | **26** | **41** | | | | | **30** | **361** |

**(ಸಿ.ಚಾಮೇಗೌಡ)**
ಆಯ್ಕೆ ಪ್ರಾಧಿಕಾರಿ ಹಾಗೂ ಸಹನಿರ್ದೇಶಕರು,
ಸಾರ್ವಜನಿಕ ಶಿಕ್ಷಣ ಇಲಾಖೆ,
ಮೈಸೂರು ವಿಭಾಗ, ಮೈಸೂರು.

**PR. 91**
**SC. 100**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59